# ಶೂದ್ರ

ಮತ್ತೆ ಮತ್ತದೆ ಮಾತಿನೊತ್ತಾಸೆ
ಬೇಡಿ ಕಾಡುವೆಯಲ್ಲ, ಯಾವ ಕೊರಗು ?
ಎಂಥ ಮಾತಲ್ಲಿ ಕೊಡಲೆ ಭರವಸೆ –
ಪ್ರೀತಿ ಕಡಲಾದಾಗ ಮಾತು ಬುರುಗು

— ರಾಮಚಂದ್ರಶರ್ಮ

ಈ ಸಂಚಿಕೆಯಲ್ಲಿ

ಪಿ.ವಿ. ಸುಬ್ರಾಯ – ಡಾ|| ನಾ. ಮೊಗಸಾಲೆ – ಎಲ್.ಎನ್. ಮುಕುಂದ ರಾಜ್ – ಜಿ. ರಾಜಶೇಖರ್ – ಬಿ. ಚಿನ್ನಸ್ವಾಮಿ – ಸಂತೋಷ ಚೊಕ್ಕಾಡಿ ನತಾಲಿಯ ಗಿಂಜ್‌ಬರ್ಗ್ – ಲಿಂಗರಾಜು – ಸಿರಾಜ್ ಅಹಮದ್ ಗಂಗಾರಾಂ ಚಂಡಾಳ – ಕೆ. ಎಚ್. ಶ್ರೀನಿವಾಸ – ಡಾ|| ಹಿ. ಶಿ. ರಾಮಚಂದ್ರೇಗೌಡ – ವಿ. ಚಿಕ್ಕವೀರಯ್ಯ – ಹೂಲಿಶೇಖರ್ – ಕನಸಿಗೊಂದು ಕಣ್ಣು

ಬೆಲೆ : 5-00 ರೂ. ದೂರವಾಣಿ : 643337

# ಮುಕ್ತಚರ್ಚೆಗಾಗಿ 'ಶೂದ್ರ' ತಿಂಗಳ ಪತ್ರಿಕೆ

ಸಂಚಿಕೆ : 2 ಡಿಸೆಂಬರ್ 1990 ಸಂಪುಟ : 17

ಸಹಾಯಕ ಸಂಪಾದಕರು : ನಿರ್ಮಲಾ ರೆಡ್ಡಿ – ಉತ್ನೂರು ರಾಜಮ್ಮ ವಿ. ಶೆಟ್ಟಿ
ಕೆ. ಎನ್. ಅರುಣ್ – ಸ. ರಘುನಾಥ್
ಜರಗನಹಳ್ಳಿ ಶಿವಶಂಕರ್–ಎಲ್. ಎನ್. ಮುಕುಂದರಾಜ್

ಶೂದ್ರಕ್ಕೆ ಚಂದಾ ಕಳಿಸಿ. ಆಜೀವ ಚಂದಾ ಬಾಬ್ತು ಕಂತುಗಳಲ್ಲಿ ಕೊಡುವವರು ಸ್ವಲ್ಪ ಜಾಗ್ರತೆ ಕೊಟ್ಟರೆ ಒಳಿತು. ಚಂದಾದ ರೀತಿಯಲ್ಲಿ ನಾಲ್ಕೈದು ವರ್ಷ ಕೊ ನಿಜವಾಗಿಯೂ ತೊಂದರೆಯಾಗುತ್ತದೆ. ಶೂದ್ರ ಬರದಿದ್ದರೆ ಪತ್ರ ಬರೆಯಿರಿ. ಚಂ... ವನ್ನು ಎಂ. ಓ. ಮೂಲಕ ಕಳುಹಿಸುವವರು ದಯವಿಟ್ಟು ಕೌಂಟರ್ ಭಾಗದಲ್ಲಿ ವಿಳಾಸ ಬರೆಯಿರಿ. ಲೇಖನ ಮತ್ತು ಕವನ ಕಳುಹಿಸುವವರು ರಿಪ್ಲೈ ಕಾರ್ಡಿಡಿ. ಚೆಕ್ ಮೂಲಕ ಕಳುಹಿಸುವವರು 10 ರೂ. ಹೆಚ್ಚುವರಿ ತುಂಬಿ.

ನೀವು ಕಳಿಸುವ ಚಂದಾ ಶೂದ್ರದ ಬೆಳವಣಿಗೆಯ ಸಂಕೇತ

ವಾರ್ಷಿಕ ಚಂದಾ : 50-00 ರೂ. ಪುಸ್ತಕ ಭಂಡಾರಗಳಿಗೆ 55-00 ರೂ.
ಆಜೀವ ಚಂದಾ : 400-00 ರೂ. (ನಾಲ್ಕು ಕಂತುಗಳಲ್ಲಿ) 450–00 ರ

ಶೂದ್ರ ಶ್ರೀನಿವಾಸ್, ನಂ. 1, 3 ನೇ ಕ್ರಾಸ್, ಬಾಲಾಜಿನಗರ, ಸುದ್ದುಗುಂಟೆಪಾಳ್ಯ
ಡಿ. ಆರ್. ಕಾಲೇಜ್ ಅಂಚೆ, ಬೆಂಗಳೂರು-560 029

# ಚಿನುವಾ ಅಚೆಬೆಯ "ಆಫ್ರಿಕನ್ ತ್ರಿವಳಿ"

— ಪಿ. ವಿ. ಸುಬ್ರಾಯ

Turning and Turning in the Widening Gyre,
The falcon cannot hear the falconer;
Things Fall apart; the Centre cannot hold;
Mere anarchy is loosed upon the world

— W.B. Yeats : *'The Second Coming'*

ಇಡೀ ಆಫ್ರಿಕಾದ ಸಾಹಿತ್ಯದಲ್ಲೇ ಅತ್ಯಂತ ಪರಿಣಾಮಕಾರಿ ಮತ್ತು ಮಹತ್ವದ ಲೇಖಕರಾದ ಚಿನುವಾ ಅಚೆಬೆ ಅವರ ಮೊದಲ ಕಾದಂಬರಿ 'Things Fall Apart' ಪ್ರಕಟವಾದದ್ದು 1958ರಲ್ಲಿ. ಅಚೆಬೆ ಒಬ್ಬ ನೈಜರಿಯನ್. ಆದರೆ ಈ ಕಾದಂಬರಿ ಬಹಳ ಮಟ್ಟಿಗೆ ಇಡೀ ಆಫ್ರಿಕಾದ ಮತ್ತು ಆಫ್ರಿಕಾದ ಹೊರಗಿನ ಓದುಗರನ್ನು ದೃಷ್ಟಿಯಲ್ಲಿಟ್ಟುಕೊಂಡು ರಚಿಸಿದ್ದಾಗಿತ್ತು. ಈ ಕಾದಂಬರಿ ಪ್ರಕಟವಾದ ಎರಡು ವರ್ಷಗಳ ನಂತರ ಅಂದರೆ 1960ರಲ್ಲಿ ನೈಜೀರಿಯ ಸ್ವತಂತ್ರವಾದಾಗ ಒಂದು ತರಹದ ರಾಷ್ಟ್ರೀಯ ಮನೋಭಾವನೆ ನಿಚ್ಚಳವಾಗಿ ಪ್ರಕಟವಾಗತೊಡಗಿತು. ಅಲ್ಲಿನ ಇಂಗ್ಲಿಷ್ ವಿದ್ಯಾಭ್ಯಾಸದ ...ಕೇಟ್ ಪರೀಕ್ಷೆಗಳೆಲ್ಲಾ "ಆಫ್ರಿಕನ್ನೈಸ್" ಆಗಲಿಕ್ಕೆ ಶುರುವಾದಾಗ, 'Things Fa" Apart' ಅಲ್ಲಿನ ಪಠ್ಯಕ್ರಮದಲ್ಲಿ ಸೇರ್ಪಡೆಗೊಂಡ ಆಫ್ರಿಕಾದ ಲೇಖಕನೊಬ್ಬನ ಮೊದಲ ಕಾದಂಬರಿಯಾಯಿತು. ಆ ನಂತರ ಅಚೆಬೆಯ 2 ಕಾದಂಬರಿಗಳು, 'No longer at Eas' (1960) ಮತ್ತು 'Arrow of God' (1964) ಪ್ರಕಟಗೊಂಡವು. ಈ ಮೂರು ಕಾದಂಬರಿಗಳನ್ನು ಒಳಗೊಂಡ "ಆಫ್ರಿಕನ್ ತ್ರಿವಳಿ" 1988ರಲ್ಲಿ ಪ್ರಕಟವಾಯಿತು.

ಒಂದು ದೇಶೀ ಮತ್ತು ಐರೋಪ್ಯ ಸಂಸ್ಕೃತಿ ಪರಸ್ಪರ ಮುಖಾಮುಖಿಯಾದಾಗ ಉಂಟಾಗುವ ಧಾರ್ಮಿಕ, ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ತಲ್ಲಣಗಳನ್ನು ವೈಯಕ್ತಿಕ ಹಾಗೂ ಸಾಮುದಾಯಿಕ ನೆಲೆಗಳಲ್ಲಿ ಗುರುತಿಸುವ ಹಾಗೂ ಅಂತಹ ಏರುಪೇರುಗಳಿಂದಾಗಿ ಒಂದು ದೇಶೀಯ ಜನಾಂಗದಲ್ಲಿ ಉಂಟಾಗಬಹುದಾದ ಎಲ್ಲಾ ತರಹದ ಅಂದರೆ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಬದಲಾವಣೆಗಳನ್ನು ವಸ್ತುನಿಷ್ಠವಾಗಿ ನೋಡುವ ದೃಷ್ಟಿಕೋನ ಈ ಮೂರೂ ಕಾದಂಬರಿಗಳಲ್ಲಿ ವ್ಯಕ್ತವಾಗಿದೆ. ...ವಾ ಅಚೆಬೆ ಈ ಬದಲಾವಣೆಗಳನ್ನು ಗ್ರಹಿಸುವ ಕ್ರಮವೇ ವಿಶಿಷ್ಟವಾದದ್ದು. ...ಂದರೆ ಅಚೆಬೆ ಮೂಲಭೂತವಾಗಿ ಒಂದು ಸಂಸ್ಕೃತಿಯ ವಿಮರ್ಶಕ. ಆದ್ದರಿಂದಲೇ ಅಚೆಬೆಗೆ ಯಾವುದೇ ಜೀವನ ಕ್ರಮವನ್ನು ಅದರ ಒಳಹೊಕ್ಕು ಬೇಧಿಸುವ ಹಾಗೂ

---

ಪಿ.ವಿ. ಸುಬ್ರಾಯ, ಇಂಗ್ಲಿಷ್ ವಿಭಾಗ, ಲಾಲ್‌ಬಹದೂರ್ ಕಾಲೇಜ್, ಸಾಗರ, ಶಿವಮೊಗ್ಗ ಜಿಲ್ಲೆ

ಅದರ ವಿರೋಧಾಭಾಸಗಳನ್ನು ಅರ್ಥ ಮಾಡಿಕೊಳ್ಳುವ ಸಮಗ್ರವಾದ ಒಳನೋಟವಿದೆ. (Pan African) ಈ ರೀತಿ ಒಂದು ಸಂಸ್ಕೃತಿಯನ್ನು ಗ್ರಹಿಸುವ ಚಿಕಿತ್ಸಕ ದೃಷ್ಟಿ ಹಲವು ಹತ್ತು ಅಂಶಗಳ ಜೊತೆ ಮೇಳೈಸಿರುವುದರಿಂದ ಅಚೆಬೆಯ ಬರವಣಿಗೆ ಕೇವಲ ಘಟನಾವಳಿಗಳ ದಾಖಲೆಯಾಗಿರದೆ. ಒಂದು ತಾತ್ವಿಕ ಮತ್ತು ಸಾಂಸ್ಕೃತಿಕ ವಾತಾವರಣ ವನ್ನು ಸೃಷ್ಟಿಸುವ ಜೀವಂತ ಕಲಾಕೃತಿಗಳಾಗಿವೆ.

ಅಚೆಬೆ ಆಫ್ರಿಕದ ಈಬೊ ಜನಾಂಗವನ್ನು ಅದು ವಸಾಹತುಶಾಹಿ ಆಡಳಿತ ಕ್ರಮಕ್ಕೆ ಒಳಗಾಗುವ ಮುಂಚೆ ಹಾಗೂ ನಂತರ ನೋಡುವ ಕ್ರಮದ ಬಗ್ಗೆ ಜೆರಾಲ್ಡ್ ಮೂರ್ ವ್ಯಕ್ತಪಡಿಸಿರುವ ಅಭಿಪ್ರಾಯಗಳು ಕುತೂಹಲಕಾರಿಯಾಗಿವೆ :

"ತನ್ನ ಕಾದಂಬರಿಗಳಲ್ಲಿನ ಅಚೆಬೆಯ ಉದ್ದೇಶ ತನ್ನ ಬಾಲ್ಯಾವಸ್ಥೆಯ ಆಫ್ರಿಕಾದ ಸಮಾಜವನ್ನು ಗುರುತಿಸುವುದಲ್ಲದೆ, ಆ ಅವಸ್ಥೆಯ ಮುಖಾಂತರ ಅದರ 200 ವರ್ಷ ಗಳ ಹಿಂದಿನ ಸ್ಥಿತಿಯನ್ನು ಅರ್ಥ ಮಾಡಿಕೊಳ್ಳುವುದಾಗಿತ್ತು. ಆ ಪ್ರಕ್ರಿಯೆಯಲ್ಲಿ ಅಚೆಬೆ ಈಬೊ ಜನಾಂಗ ವಸಾಹತುಶಾಹಿ ಆಡಳಿತಕ್ಕೆ ಸಿಕ್ಕು ನಾಶವಾಗುವ ದುರಂತವನ್ನು ಸಾಮುದಾಯಿಕ ಮತ್ತು ವೈಯಕ್ತಿಕ ಹಿನ್ನೆಲೆಗಳಲ್ಲಿ ಗುರುತಿಸುವಾಗ ಈಬೊ ಸಮಾಜ ವನ್ನು ಯಥಾಸ್ಥಿತಿಯಲ್ಲಿ ಚಿತ್ರಿಸುವ, ಅದರ ಲೋಪದೋಷಗಳನ್ನು ಕಂಡುಕೊಳ್ಳುವ ಆಶಯವನ್ನು ಬದಿಗೆ ಸರಿಸುವುದಿಲ್ಲ." (Twelve African writers by Gerald Moor, P. 124)

ಆದ್ದರಿಂದ ಅಚೆಬೆಯ ಬರವಣಿಗೆಯಲ್ಲಿ ಒಂದು ಸಮಾಜದ ಸಂಸ್ಕೃತಿಯ ವಿವರಣೆ ಗಳ ಜೊತೆಗೆ ಆ ವಿವರಗಳನ್ನು ಪ್ರತಿಮೆಗಳನ್ನಾಗಿಸುವ, ಅವುಗಳನ್ನು ಸಾಂಕೇತಿಕಮಟ್ಟ ದಲ್ಲೂ ನಿರ್ವಹಿಸುವ ಆಧುನಿಕ ಕಲಾವಂತಿಕೆ ನಿಚ್ಚಳವಾಗಿ ಕಂಡುಬರುತ್ತದೆ. ಮುಂದು ವರಿದು ಜೆರಾಲ್ಡ್ ಹೇಳುತ್ತಾರೆ : "ಅಚೆಬೆ ವಿವರಗಳನ್ನು ಮಂಡಿಸುವಾಗ ಮತ್ತು ಈಬೊ ಜನಾಂಗದ ಸಾಂಪ್ರದಾಯಿಕ ಬದುಕಿನ ಕ್ರಮಗಳನ್ನು ದಾಖಲಿಸುವಾಗ ಅವು ಗಳನ್ನು ಪ್ರತಿಪಾದಿಸುವುದೂ ಇಲ್ಲ, ಹಳಿಯುವುದೂ ಇಲ್ಲ. ತನಗೆ ಕಾಣುವ ಈಬೊ ಸಮಾಜವನ್ನು ಅಚೆಬೆ ಚಿತ್ರಿಸುತ್ತಾರೆ. ಅಚೆಬೆ ನಮ್ಮಿಂದ ಅಪೇಕ್ಷೆಪಡುವುದೂ ಅದನ್ನೇ. ಅಂದರೆ, ಅದೊಂದು ಜನಾಂಗದ ವಾಸ್ತವ ಬದುಕಿನ ಚಿತ್ರಣ ಮಾತ್ರ. ಅಚೆಬೆಯ ಪಾತ್ರಗಳು ನಮಗೆ ವ್ಯಕ್ತಿಗಳಾಗಿ, ಒಂದು ಸಮುದಾಯವಾಗಿ ಕಾಣುತ್ತಾರೆ. ಆ ಪಾತ್ರಗಳ ಆಚೆ ಅಚೆಬೆ ಏನನ್ನೂ ಹುಡುಕುತ್ತಿಲ್ಲ." (P. 124)

ಜೆರಾಲ್ಡ್ ಮಾತುಗಳನ್ನು ನಾವು ಈ ರೀತಿಯಾಗಿ ಕೂಡ ಅರ್ಥೈಸಬಹುದು : ಅಚೆಬೆಯ ಆಶಯಗಳು ಕೇವಲ ವಿವರಣಾತ್ಮಕ. ಎಲ್ಲ ವಿಚಾರಗಳು ಆ ವಿವರಣೆಗಳಲ್ಲೇ ನಿಜವಾಗಬೇಕು.

ಆದರೆ ಯಾವುದೇ ಪ್ರತಿಭಾನ್ವಿತ ಕಲಾಕಾರ ಅಷ್ಟಕ್ಕೇ ನಿಲ್ಲುವುದಿಲ್ಲ. ಆತನಿಗೆ ವಿವರಣೆಗಳು ಎಷ್ಟು ಮುಖ್ಯವೋ ಅಷ್ಟೇ ಆ ವಿವರಣೆಗಳ ಆಚೆ ಧ್ವನಿತವಾಗುವ ಅಂಶಗಳೂ ಮುಖ್ಯವಾಗುತ್ತವೆ. ಅಚೆಬೆ ಆ ತರಹದ ಒಬ್ಬ ಕಲಾಕಾರ. ಒಂದು ಸಮಾಜದ ಸಂಸ್ಕೃತಿಯ ವಿವರಣೆ ನೀಡುವಾಗ ಅಚೆಬೆ ಆ ಸಮಾಜ ಅಥವಾ ಸಂಸ್ಕೃತಿ ಮಡುಗಟ್ಟಿ ನಿಂತ ನೀರಲ್ಲ ಎಂಬುದನ್ನು ಸಹ ಹೇಳುತ್ತಿರುತ್ತಾರೆ. ಏಕೆಂದರೆ ಯಾವುದೇ ಸಂಸ್ಕೃತಿ ಕಾಲಕಾಲಕ್ಕೆ ಬದಲಾಗುತ್ತ ಇರಬೇಕಾಗುತ್ತದೆ. ಆ ಬದಲಾವಣೆಗೆ ಪೂರಕವಾಗಿ ಒಂದು 'Mood'ಅನ್ನು ಸೃಷ್ಟಿಸಿಕೊಳ್ಳಬೇಕಾಗುತ್ತದೆ. ಅದೇ ಎಲ್ಲವನ್ನು ನಿರ್ಧರಿಸುವ ನಿರ್ಣಾಯಕ ಅಂಶವಾಗಿ ರೂಪುಗೊಳ್ಳುತ್ತದೆ. ಏಕೆಂದರೆ ಯಾವುದೇ ಸಂಸ್ಕೃತಿಯ ಉದ್ದೇಶ ತೀರಾ ಉದಾತ್ತವಾದುದ್ದನ್ನು, ಶ್ರೇಷ್ಟವಾದುದ್ದನ್ನು, ಗಂಭೀರವಾದುದ್ದನ್ನು ತಲುಪುವುದು. ಅಚೆಬೆ ಆಫ್ರಿಕಾದ ಸಂಸ್ಕೃತಿಯನ್ನು ವಿವರಿಸುವಾಗ ಈ ತರಹದ 'Sublime'ಗೆ ಹೆಚ್ಚು ಒತ್ತು ಕೊಡುತ್ತಾರೆ. ವಸಾಹತುಶಾಹಿ ಆಡಳಿತಕ್ರಮ ಆಫ್ರಿಕಾವನ್ನು ಪ್ರವೇಶಿಸುವ ಮುಂಚೆಯೇ ಆ ಸಂಸ್ಕೃತಿಯಲ್ಲಿ ಬದಲಾವಣೆಗಳು ಆಗುತ್ತಿದ್ದುದನ್ನು ಅಚೆಬೆಯ 'Things Fall Apart' ಕಾದಂಬರಿಯಲ್ಲಿ ಕಾಣಬಹುದು. ಒಂದು ಸಮಷ್ಟಿಯ ಹಿನ್ನೆಲೆಯಲ್ಲಿ ರೂಪುಗೊಂಡಂತಹ ಆಫ್ರಿಕಾದ ಜನಾಂಗ ನಿಧಾನವಾಗಿ ವ್ಯಕ್ತಿ ಪ್ರಧಾನ ಅಂಶಗಳನ್ನು ರೂಢಿಸಿಕೊಳ್ಳುತ್ತಿರುವುದು ಈ ಕಾದಂಬರಿಯಲ್ಲಿ ಗೊತ್ತಾಗುತ್ತದೆ. ಒಕೊಂಕೊನನ್ನು ಅವನ ಸಮುದಾಯದವರು ಗೌರವಿಸುವುದು ಅವನಲ್ಲಿನ ಶ್ರೇಷ್ಠತೆಗಾಗಿ ಮಾತ್ರ. ಅವನ ಅಪ್ಪ ಯುನೋಕಾ ಎಷ್ಟೇ ರೋಗಗ್ರಸ್ಥ ಸಂಸ್ಕೃತಿಯುಳ್ಳವನಾಗಿದ್ದರೂ ಅದನ್ನೆಲ್ಲಾ ಕಡೆಗಣಿಸಿ ಅಲ್ಲಿನ ಜನ ಒಕೊಂಕೊನನ್ನು ಒಪ್ಪಿಕೊಳ್ಳುತ್ತಾರೆ. ಅಂದರೆ ಆಫ್ರಿಕಾದ ಸಮಾಜ ಎಷ್ಟೇ ಸಂಪ್ರದಾಯರೂಢವಾಗಿದ್ದರೂ ಸಹ ತನ್ನ ಪರಂಪರೆಯನ್ನು ನಿರಾಕರಿಸಿ, ಹೊಸತಕ್ಕೆ ಆತುಕೊಳ್ಳುವಷ್ಟು ಪ್ರಗತಿಪರವಾಗಿರುವುದಕ್ಕೆ ಸಾಧ್ಯವಾಗುತ್ತದೆ. ಹೀಗಾಗಿ ಯಾವುದೇ ಸಂಸ್ಕೃತಿ ತನ್ನಲ್ಲೇ ಲಿಬರಲ್ ಆಗಿರದಿದ್ದರೆ ವಸಾಹತುಶಾಹಿ ಆಡಳಿತ ಬೇರು ಬಿಡಲು ಸಾಧ್ಯವೇ ಇಲ್ಲ. ಆದ್ದರಿಂದ ಯಾವುದೇ ದೇಶೀ ಸಂಸ್ಕೃತಿ ಎಲ್ಲಿಯವರೆಗೆ ಪ್ರಗತಿ ವಿರೋಧೀ ಧೋರಣೆಗಳನ್ನು ತಳೆದಿರುತ್ತದೋ ಅಲ್ಲಿಯವರೆಗೆ ಯಾವುದೇ ಐರೋಪ್ಯ ಸಂಸ್ಕೃತಿಯ ಜೊತೆ ಸಾಮರಸ್ಯ ಸಾಧ್ಯವಾಗುವುದಿಲ್ಲ. ಹೀಗಾಗಿ ಒಂದು ವಸಾಹತುಶಾಹಿ ಆಡಳಿತ ವ್ಯವಸ್ಥೆ ಬೇರೂರುವುದಕ್ಕೆ ಒಂದು ಸಂಸ್ಕೃತಿಯಲ್ಲಿಯೇ ಅಂತರ್ಗತವಾಗಿರುವ, ಬದಲಾವಣೆಗೆ ಹಂಬಲಿಸುವ ಜೀವನಕ್ರಮ, ಹೊಸದಕ್ಕೆ ತೆರೆದುಕೊಳ್ಳುವ ಉದಾತ್ತತೆ, ಇವುಗಳ ಜೊತೆಗೆ ಆ ಸಂಸ್ಕೃತಿಯ ಆಂತರಂಗಿಕ ವಿರೋಧಾಭಾಸಗಳು, ವಿಪರ್ಯಾಸಗಳು ಕಾರಣವಾಗುತ್ತವೆ.

ಇನ್ನೂ ಮೂರು ಮುಖ್ಯ ನೆಲೆಗಳಲ್ಲಿ ವಸಾಹತುಶಾಹಿ ಆಡಳಿತ ಒಂದು ದೇಶೀಯ ಸಂಸ್ಕೃತಿಯ ಮೇಲೆ 'ಆಕ್ರಮಣ' ನಡೆಸುತ್ತದೆ : ಧಾರ್ಮಿಕ, ಆರ್ಥಿಕ ಮತ್ತು ರಾಜಕೀಯ ನೆಲೆಗಳಲ್ಲಿ. (ಇವುಗಳನ್ನು ಮುಂದೆ ಚರ್ಚಿಸಲಾಗುವುದು.)

'Things Fall Apart' ಕಾದಂಬರಿಯಲ್ಲಿ ಮೂರು ವಿಭಾಗಗಳಿವೆ. ಮೊದಲನೆಯ ಭಾಗದಲ್ಲಿ ಸಂಪ್ರದಾಯಸ್ಥ ಈಬೋ ಸಂಸ್ಕೃತಿಯ ಬಿಳಿಯರ ಆಗಮನಕ್ಕೆ ಮುಂಚಿನ ವಿವರಗಳಿವೆ. ಕಥಾನಾಯಕನಾದ ಒಕೊಂಕೊ ಮತ್ತು ಅವನ ಜನಾಂಗದ ನಡುವಿನ ಸಂಬಂಧ ವೈಯಕ್ತಿಕ ಹಾಗೂ ಜನಾಂಗೀಯ ಮಟ್ಟದಲ್ಲಿ ವಿಶ್ಲೇಷಿಸಲ್ಪಟ್ಟಿದೆ. ಒಕೊಂಕೊ ವೈಯಕ್ತಿಕವಾಗಿ ಅತ್ಯಂತ ಪ್ರತಿಷ್ಠಿತ ವ್ಯಕ್ತಿ. ಆತ ಒಬ್ಬ ಶ್ರೇಷ್ಠ ಕುಸ್ತಿಪಟು. ಯುಮೋಫಿಯಾದ ಸುತ್ತಲಿನ ಒಂಭತ್ತು ಹಳ್ಳಿಗಳಲ್ಲಿ ಆತ ತನ್ನ ಶ್ರೇಷ್ಠತೆಯ ಛಾಪನ್ನು ಒತ್ತಿದ್ದಾನೆ. ಅತ್ಯಂತ ನಿರ್ಣಾಯಕವಾದಂತಹ ಕುಸ್ತಿಪಂದ್ಯವೊಂದರಲ್ಲಿ ಆತ ಒಂಭತ್ತು ವರ್ಷಗಳ ಕಾಲ ಅಗ್ರಗಣ್ಯನಾಗಿದ್ದ ಅಮೆಲಿನ್ಜನನ್ನು ಸೋಲಿಸಿದ್ದಾನೆ.

ಆದರೆ ಒಕೊಂಕೊನನ್ನು ಅತ್ಯಂತ ತೀವ್ರತರವಾದ ಭಯ ಬಾಧಿಸುತ್ತದೆ, ತಾನು ತನ್ನ ಅಪ್ಪನಾದ ಯುನೋಕಾನನ್ನು ಹೋಲುವ ಹಾಗೂ ಬದುಕಿನಲ್ಲಿ ಅಯಶಸ್ವಿಯಾಗುವ ಭಯ. ತನ್ನ ಅಪ್ಪ ಲೋಫರ್ ಆಗಿದ್ದ; ಯಾವುದೇ ಕೀರ್ತಿಯನ್ನು ಗಳಿಸಿರಲಿಲ್ಲ; ಸಾಲಗಾರನಾಗಿದ್ದ; ಸೋಮಾರಿಯಾಗಿ ಕೊಳಲು ಬಾರಿಸುತ್ತ ಕಾಲಕಳೆಯುತ್ತಿದ್ದ; ಅವನ ಬಗ್ಗೆ ಜನರಿಗೆ ಕಿಂಚಿತ್ತೂ ಗೌರವವಿರಲಿಲ್ಲ; ತನಗೆ ಸಾಲ ಕೊಟ್ಟವರನ್ನೇ ಅಪಹಾಸ್ಯ ಮಾಡುತ್ತಿದ್ದ; ಯುದ್ಧ ಎಂದರೆ ಭಯಪಡುವ ಹೇಡಿಯಾಗಿದ್ದ; ಅವನು ಹೊಟ್ಟೆಬೇನೆಯಿಂದ ಸತ್ತಿದ್ದು, ಆತನನ್ನು 'ಅನಿಷ್ಟ ಕಾಡಿ'ಗೆ ಎಳೆದುಕೊಂಡು ಹೋಗಿ ಬಿಟ್ಟಿದ್ದು, ಅಲ್ಲೇ ಯುನೋಕಾ ಸತ್ತು ಕೊಳೆತು ಹೋಗಿದ್ದು, ಮುಂತಾದ ವಿಚಾರಗಳಿಂದ ವಿಮುಕ್ತನಾಗಿ, ಒಕೊಂಕೊ ಬದುಕಬೇಕಾಗಿದೆ. ತನ್ನ ಅಪ್ಪನ ನೆನಪಾದಾಗಲೆಲ್ಲಾ ಅಸಹ್ಯವಾಗುತ್ತದೆ ಒಕೊಂಕೊಗೆ. ಅವನ ಬದುಕಿನ ಸಾರ್ಥಕತೆಯೆಲ್ಲಾ ಯುನೋಕಾನನ್ನು ಮರೆಯುವ ಪರಿಶ್ರಮದಲ್ಲೇ ವ್ಯಕ್ತವಾಗುತ್ತ ಹೋಗುತ್ತದೆ. ಅವನಲ್ಲಿರುವ ಠೇಂಕಾರ, ಸಿಟ್ಟು, ಅಸಹ್ಯ, ಜಿಗುಪ್ಸೆ, ಇವುಗಳಿಗೆಲ್ಲಾ ಅವನ ಪರಂಪರೆಯೇ ಕಾರಣ. ಅವನು ಎಷ್ಟು ಕೋಪೋದ್ರೇಕನಾಗಬಹುದೆಂದರೆ, ಅವನ ಇಡೀ ಜನಾಂಗ ಒಂದು ವಾರದ 'ಶಾಂತಿವ್ರತ' ಆಚರಿಸುತ್ತಿರುವಾಗಲೇ ಆತ ಒಂದು ಕ್ಷುಲ್ಲಕ ಕಾರಣಕ್ಕೆ ಕುಪಿತಗೊಂಡು ತನ್ನ ಕಿರಿಯ ಹೆಂಡತಿಯನ್ನು ಥಳಿಸಿ, ಆಮೇಲೆ ಪರಿತಪಿಸುತ್ತಾನೆ. ಅವನ ಅತ್ಯಂತ ಕಿರಿಯ ಹೆಂಡತಿ ಒಜಿಗೋ ಇವನಿಗೆ ಊಟ ತಯಾರಿಸದೆ ತಲೆ ಬಾಚಿಕೊಳ್ಳಲು ಪಕ್ಕದ ಮನೆಗೆ ಹೋಗಿದ್ದೇ ಅವಳು ಮಾಡಿದ ಅಪರಾಧ.

ಆಫ್ರಿಕಾದ ಸಮಾಜ ಎಷ್ಟು ಕಠಿಣ ಹಾಗೂ ಸಂಪ್ರದಾಯಸ್ಥ ಎನ್ನುವುದು

ಒಕೊಂಕೊನ ಅಪರಾಧಕ್ಕಾಗಿ ಆತನನ್ನು ಶಿಕ್ಷಿಸುವ ಭೂಮಿ ದೇವತೆ 'ಅನಿ'ಯ ಪ್ರತಿನಿಧಿ ಇಜಿನಿಯ ಮಾತುಗಳಿಂದ ಗೊತ್ತಾಗುತ್ತದೆ. ಆತ ಒಕೊಂಕೊಗೆ ಹೇಳುತ್ತಾನೆ :

"ನಿನ್ನ ಹೆಂಡತಿ ತಪ್ಪು ಮಾಡಿರಬಹುದು ; ಆದರೆ ನೀನು ನಿನ್ನ ಮನೆಗೆ ಬಂದಾಗ ನಿನ್ನ ಹೆಂಡತಿ ತನ್ನ ಪ್ರಿಯತಮನ ಜೊತೆ ಮಲಗಿದ್ದರೂ ಕೂಡಾ ನೀನು ಅವಳನ್ನು ಥಳಿಸಿದ್ದರೆ ದೊಡ್ಡ ಅಪರಾಧವಾಗುತ್ತಿತ್ತು (The African Trilogy, P. 37). ಹೀಗಾಗಿ ಶಾಂತಿವ್ರತವನ್ನು ಆಚರಿಸುವಾಗ, ಅದಕ್ಕೆ ಸ್ವಲ್ಪವೂ ಭಂಗಬಾರದ ಹಾಗೆ ಜನ ನಡೆದುಕೊಳ್ಳಬೇಕಾಗುತ್ತದೆ. ಈ ಸಂಸ್ಕೃತಿಯ ನಡಾವಳಿಗಳು ಇಷ್ಟು ಕಠಿಣವಾಗಿರು ವುದಕ್ಕೆ ರಾಜಕೀಯ ಮತ್ತು ಸಾಂಸ್ಕೃತಿಕ ಕಾರಣಗಳಿವೆ. ಯುಮೋಫಿಯಾ ಯಾವಾಗಲೂ ತನ್ನ ಪಕ್ಕದ ಊರುಗಳ ಜೊತೆ ಯುದ್ಧದಲ್ಲಿ ತೊಡಗಿರುತ್ತಿತ್ತು. ಹೀಗಾಗಿ ಹಿಂಸೆ, ರಕ್ತಪಾತದಲ್ಲಿಯೇ ಸದಾಕಾಲ ಅದ್ದಿಹೋಗಿರುವ ಈ ಸಂಸ್ಕೃತಿಗೆ ತನ್ನ ಪಾಪಕ್ಕಾಗಿ ಪ್ರಾಯಶ್ಚಿತ್ತ ಮಾಡಿಕೊಳ್ಳುವುದೂ ಅನಿವಾರ್ಯವಾಗಿದ್ದಿರಬೇಕು. ಆದ್ದರಿಂದ ಒಂದು ವಾರ ಕಾಲ 'ಶಾಂತಿವ್ರತ' (Week of Peace) ಆಚರಿಸುವುದು ಅಲ್ಲಿನ ಸಂಸ್ಕೃತಿಯ ಒಂದಂಶವಾಗಿತ್ತು.

ಒಕೊಂಕೊನ ಪಾತ್ರ ರಚನೆ, ಕಾದಂಬರಿಯ ಮೊದಲ ಭಾಗದಲ್ಲಿ ಅವನ ಅಪ್ಪ ಯುನೋಕಾನ ವೈದೃಶ್ಯಗಳ ಹಿನ್ನೆಲೆಯಲ್ಲಿ ರೂಪುಗೊಳ್ಳುತ್ತಾ ಹೋಗುತ್ತದೆ. ಒಕೊಂಕೊನ ಕ್ರಿಯಾಶೀಲತೆ ಮತ್ತು ಯುನೋಕಾನ ಬಂಜರು ವ್ಯಕ್ತಿತ್ವ ಮುಖಾಮುಖಿ ಯಾಗುವ ಪ್ರಕ್ರಿಯೆಯಲ್ಲಿಯೇ ಯುನೋಕಾನ ಕೆಲವು ಇತ್ಯಾತ್ಮಕ ಅಂಶಗಳು ನುಸುಳಿ ಬಿಡುತ್ತವೆ. ಯುನೋಕಾ ದೈಹಿಕವಾಗಿ ಎಷ್ಟೇ ಕ್ರಿಯಾಹೀನನಾಗಿದ್ದರೂ ಸಹ ಮಾನ ಸಿಕವಾಗಿ ತನ್ನ ಅವಸ್ಥೆಯನ್ನು ಮೀರಬಲ್ಲ. ಆತ ಕೊಳಲು ನುಡಿಸುತ್ತ, ತನ್ನದೇ ಆದ ಪ್ರಪಂಚದಲ್ಲಿ ತನ್ಮಯನಾಗಬಲ್ಲ. ಅವನಲ್ಲಿರುವ ತನ್ಮಯಶೀಲತೆಯಾಗಲೀ, ಸಂಯಮ ವಾಗಲೀ ಒಕೊಂಕೊನಲ್ಲಿಲ್ಲ.

ಒಕೊಂಕೊನ ಬದುಕಿನಲ್ಲಿ ಅದೊಂದು ನತದೃಷ್ಟ ವರ್ಷವಾಗಿದ್ದ ಸಂದರ್ಭ. ಪ್ರಕೃತಿಯ ವಿಕೋಪಕ್ಕೆ ಬಲಿಯಾಗಿ ಆತ ಬೆಳೆದ ಬೆಳೆಯೆಲ್ಲಾ ನಾಶವಾಗಿತ್ತು. ಯುನೋಕಾ ಆಗ ಕಾಯಿಲೆಯಿಂದ ನರಳುತ್ತಿದ್ದ. ಆತ ಮಗನಿಗೆ ಧೃತಿಗೆಡಬಾರದೆಂದು ಸಮಾಧಾನಪಡಿಸಿ ಹೇಳಿದ್ದ :

"....ಹತಾಶನಾಗಬೇಡ; ನನಗೆ ಗೊತ್ತು ನೀನು ಎದೆಗುಂದುವುದಿಲ್ಲ ಎಂದು. ಏಕೆಂದರೆ ನೀನು ಬಹಳ ಹೆಮ್ಮೆಯ ಮನುಷ್ಯ; ಇದು ಎಲ್ಲರಿಗೂ ಆದ ಸೋಲಾದ್ದರಿಂದ ನೀನು ಇದನ್ನು ನಿಭಾಯಿಸಬಹುದು; ಮನುಷ್ಯ ಒಬ್ಬನೇ ಸೋತಾಗ ಮಾತ್ರ ತೀವ್ರತರ ವಾದ ಹತಾಶಭಾವ ಉಂಟಾಗುತ್ತದೆ." (The African Trilogy, P. 33)

ಆದರೆ ಇವೆಲ್ಲಾ ಒಕೊಂಕೊಗೆ ರಗಳೆ, ರಂಪಗಳಾಗಿ ಪರಿಣಮಿಸುತ್ತವೆ. ಒಕೊಂಕೊನ ಪರಿಶ್ರಮದ ಜೊತೆಗೆ ಅವನ ಅಪ್ಪನ ಈ ಅಂಶಗಳು ಆತನಲ್ಲಿ ಸೇರಿದ್ದರೆ ಒಕೊಂಕೊ ಪರಿಪೂರ್ಣನಾದ, ಪಕ್ವಗೊಂಡ ಮನಸ್ಕನಾಗಬಹುದಿತ್ತು. ಆದರೆ ಕಾದಂಬರಿಯಲ್ಲಿ ಅಚೆಬೆ ಒಕೊಂಕೊನನ್ನು ಏಕಪಕ್ಷೀಯವಾಗಿ ಕೀರ್ತಿಸದೆ ಅವನಲ್ಲಿರುವ ನ್ಯೂನತೆಗಳನ್ನೂ ಹೇಳುವುದರಿಂದ ವಸ್ತುನಿಷ್ಠವಾಗಿ ಆತನ ಗುಣಾವಗುಣಗಳನ್ನು ವಿಮರ್ಶಿಸುವುದು ಸಾಧ್ಯವಾಗುತ್ತದೆ.

ಒಕೊಂಕೊಗೆ ತನ್ನ ಮಗ ನೋಯೆ ಬಗ್ಗೆ ಕೂಡ ಅಸಹನೆ ಇದೆ. ನೋಯೆಯ ಬೆಳವಣಿಗೆಯನ್ನು ಗಮನಿಸುವಾಗ ಮತ್ತೆ ಅವನಿಗೆ ತನ್ನ ಅಪ್ಪ ಯುನೋಕಾನ ನೆನಪಾಗುತ್ತದೆ. ತನ್ನ ಕೌಟುಂಬಿಕ ವ್ಯವಹಾರಗಳಲ್ಲಿ ಕೂಡ ಸಾದೃಶ್ಯದ ಕಲ್ಪನೆಗಳನ್ನು ಮೀರಿ ಒಕೊಂಕೊ ವರ್ತಿಸಬಲ್ಲ. ಉದಾಹರಣೆಗೆ ಈ ಘಟನೆಯನ್ನು ನೋಡಬಹುದು :

ಹೊಸ ವರ್ಷದ ಆಚರಣೆಗೆ ತಯಾರಿ ನಡೆಯುತ್ತಿದೆ. ಒಕೊಂಕೊನ ಹೆಂಡಂದಿರು ಮನೆ ಗೋಡೆಗಳಿಗೆಲ್ಲಾ ಕೆಮ್ಮಣ್ಣು ತೀಡಿ ಅಲಂಕರಿಸಿದ್ದಾರೆ. ಮದರಂಗಿಯಿಂದ ತಮ್ಮ ಹೊಟ್ಟೆ ಹಾಗೂ ಬೆನ್ನುಗಳ ಮೇಲೆಲ್ಲಾ ಅಂದವಾದ ಆಕೃತಿಗಳನ್ನು ಚಿತ್ರಿಸಿಕೊಂಡಿದ್ದಾರೆ. ತಮ್ಮ ಮಕ್ಕಳ ತಲೆಗೂದಲನ್ನು ಅಂದವಾಗಿ ಕೆತ್ತಿ ಶೃಂಗರಿಸಿದ್ದಾರೆ. ತಮ್ಮ ಬಂಧು ಬಳಗದವರು ಹಬ್ಬಕ್ಕೆ ಬರುವುದನ್ನು ಎದುರು ನೋಡುತ್ತಿದ್ದಾರೆ. ಬೈನೋ ಗ್ರಾಮದವರು ಯುಮೋಫಿಯಾದ ಹುಡುಗಿಯನ್ನು ಕೊಂದದ್ದಕ್ಕೆ ಪ್ರಾಯಶ್ಚಿತ್ತವಾಗಿ ಯುಮೋಫಿಯಾಕ್ಕೆ ನೀಡಿದ ಇಕ್‌ಮೆಫ್ಯೂನ್ ಕೂಡ ಬಹಳ ಉಲ್ಲಾಸದಿಂದಿದ್ದಾನೆ. ಅವನಿಗೆ ಯುಮೋಫಿಯಾದಲ್ಲಿ ತನ್ನ ಊರಲ್ಲಿ ನಡೆಯುತ್ತಿದ್ದುದಕ್ಕಿಂತ ಭರ್ಜರಿಯಾಗಿ ಹೊಸ ವರ್ಷದ ಹಬ್ಬ ಆಚರಣೆಯಾಗುತ್ತಿದೆ ಎಂಬ ನಂಬಿಕೆ ಇದೆ. ಇದ್ದಕ್ಕಿದ್ದ ಹಾಗೆ ಒಕೊಂಕೊ ಕುಪಿತನಾಗುತ್ತಾನೆ. ಅವನ ಎರಡನೆ ಹೆಂಡತಿ ಬಾಳೇಮರದ ಕೆಲವು ಎಲೆಗಳನ್ನು ಕತ್ತರಿಸಿದ್ದಕ್ಕೆ ಆವೇಶಭರಿತನಾಗಿ ಇಡೀ ಮರವನ್ನೇ ಕೊಂದಿದ್ದಾಳೆಂದು ಗುಡುಗುತ್ತಾನೆ. ಅವಳಿಗೆ ಚೆನ್ನಾಗಿ ಥಳಿಸುತ್ತಾನೆ. ಒಕೊಂಕೊಗೆ ತನ್ನ ಸಿಟ್ಟನ್ನು ತಣಿಸಲು ಇದೊಂದು ನೆಪವಾಗುತ್ತದೆ. ಏಕೆಂದರೆ, ಅವನಿಗೆ ಇಂತಹ ಹಬ್ಬ ಹರಿದಿನಗಳ ಬಗ್ಗೆ ನಂಬಿಕೆ ಇಲ್ಲ. ಈ ಹಬ್ಬಗಳಿಗಾಗಿ ಸಮಯ ವ್ಯಯ ಮಾಡುವುದರ ಬದಲು ತನ್ನ ಹೊಲದಲ್ಲಿ ದುಡಿಯುವುದೇ ಅವನಿಗೆ ಖುಷಿ ಕೊಡುತ್ತದೆ. ಹೀಗಾಗಿ ಒಕೊಂಕೊಗೆ ತನ್ನ ಜನಾಂಗದ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಸಹ ತನ್ನನ್ನು ತೊಡಗಿಸಿಕೊಳ್ಳುವುದಕ್ಕೆ ಸಾಧ್ಯವಾಗುವುದಿಲ್ಲ. ಇದರಿಂದಾಗಿ ಒಕೊಂಕೊ ಯಾವುದೇ ಸಂದರ್ಭದಲ್ಲೂ ತನ್ನ ಜನಾಂಗದವರ ಜೊತೆ ಅಥವಾ ಮನೆಯವರ ಜೊತೆ ಒಂದು ಅರ್ಥಪೂರ್ಣವಾದ ಸಂಬಂಧವನ್ನು ಏರ್ಪಡಿಸಿಕೊಳ್ಳುವುದು ಅಸಾಧ್ಯವಾಗುತ್ತದೆ. ದೈಹಿಕ ಪರಿಶ್ರಮ

ಮತ್ತು ಮಾನಸಿಕ ಏಕಾಕಿತನದಿಂದಾಗಿ ಒಕೊಂಕೊ ತನ್ನ ಸಮುದಾಯದ ಜೊತೆಗಿನ ಪಾರಂಪರಿಕ ಮತ್ತು ಸಾಂಸ್ಕೃತಿಕ ಕೊಂಡಿಗಳನ್ನೆಲ್ಲಾ ಕಳಚಿಕೊಳ್ಳುತ್ತಾ ಸಾಗುತ್ತಾನೆ. ತನ್ನ ವ್ಯಷ್ಟಿ ಪ್ರಜ್ಞೆಯಲ್ಲಿಯೇ ಎಲ್ಲವನ್ನು ಪರಾಂಬರಿಸುವ, ಅದನ್ನೇ ನಂಬುವ ಪ್ರಕ್ರಿಯೆಯಲ್ಲಿಯೇ ಸಮಷ್ಟಿಯಿಂದ ವ್ಯವಸ್ಥಿತನಾಗಿ ದೂರ ಸರಿಯುತ್ತಾನೆ. ಅವನಲ್ಲಿರುವ ಈ ದ್ವಂದ್ವವೇ ಅವನನ್ನು ದುರಂತದ ಕೂಪಕ್ಕೆ ತಳ್ಳುವುದರಲ್ಲಿ ಪರ್ಯವಸನವಾಗುತ್ತದೆ. ಮುಂದೆ ಬಿಳಿಯರ ಆಗಮನದಿಂದ ಉಂಟಾಗುವ ತಳಮಳಗಳನ್ನು ಅರ್ಥಪೂರ್ಣವಾಗಿ ಮೀರಿ ನಿಲ್ಲುವ, ಅದನ್ನು ತಾತ್ವಿಕವಾಗಿ ವಿರೋಧಿಸುವ ಶಕ್ತಿಯನ್ನು ಇದೇ ಕಾರಣಕ್ಕಾಗಿ ಕಳೆದುಕೊಳ್ಳುತ್ತಾನೆ. ಬಿಳಿಯರು ಆಗಮಿಸಿದಾಗ ಅವನ ಜನಾಂಗದವರೇ ವಿಷಣ್ಣರಾಗಿ ಗಮನಿಸುತ್ತಿರಬೇಕಾದರೆ ಈತ ಉದ್ರೇಕಗೊಳ್ಳುತ್ತಾನೆ. ಆದರೆ ಆ ಉದ್ರೇಕ ಇಡೀ ಸಮಷ್ಟಿಯ ಉದ್ರೇಕವಲ್ಲ. ಅದಕ್ಕೆ ಅವನ ಸಮಷ್ಟಿಯ ಬೆಂಬಲವೂ ಇಲ್ಲ. ಹೀಗಾಗಿ ತನ್ನ ಸಮಷ್ಟಿಯಿಂದಲೂ ದೂರವಾಗಿ, ಬಿಳಿಯರ ಆಗಮನದಿಂದಾಗುವ ಹೊಸತನವನ್ನೂ ಒಪ್ಪಿಕೊಳ್ಳದೆ ಅವನ ಬದುಕು ದುರಂತವಾಗುತ್ತದೆ.

ಈಗ ಧಾರ್ಮಿಕ ಉತ್ಪಾತತೆಯಲ್ಲಿ ಹೇಗೆ ಇಂತಹ ಒಂದು ದೇಶೀಯ ಸಂಸ್ಕೃತಿ ಅತ್ಯಂತ ಹೀನವಾದ ಬರ್ಬರ ಕೃತ್ಯಗಳಲ್ಲಿ ತೊಡಗಿರುತ್ತದೆ ಎಂಬುದನ್ನು ನೋಡೋಣ. ಇಕ್‌ಮೆಫ್ಯೂನ್ ಯುಮೋಫಿಯಾಕ್ಕೆ ಬಂದಿದ್ದರ ಬಗ್ಗೆ ಹೇಳಿಯಾಗಿದೆ. ಮೂರು ವರ್ಷಗಳ ಕಾಲ ಆತನು ಒಕೊಂಕೊನ ವಾಸ್ತವ್ಯದಲ್ಲಿ ಬೆಳೆಯುತ್ತಾನೆ. ಆಮೇಲೆ ಅವನನ್ನು ಕೊಲ್ಲಿಸಬೇಕೆಂದು ದಿವ್ಯವಾಣಿಯಾಗುತ್ತದೆ. ಈ ಇಕ್‌ಮೆಫ್ಯೂನ್ ಮತ್ತು ನೋಯೆ ಅಣ್ಣತಮ್ಮಂದಿರಾಗಿ ಬೆಳೆದಿರುತ್ತಾರೆ ಒಕೊಂಕೊನನ್ನು ಇಕ್‌ಮೆಫ್ಯೂನ್ ಅಪ್ಪ ಅಂತಲೇ ಕರೆಯುತ್ತಾನೆ. ನೋಯೆಯ ಬೆಳವಣಿಗೆಯಾಗುತ್ತಿರುವುದು ಆತ ಇಕ್‌ಮೆಫ್ಯೂನ್‌ನ ಜೊತೆಯಲ್ಲಿರುವುದೇ ಕಾರಣ ಎಂಬುದು ಒಕೊಂಕೊಗೆ ಗೊತ್ತಿದೆ. ಇಕ್‌ಮೆಫ್ಯೂನ್‌ಗೆ ಗೊತ್ತಿಲ್ಲದ ಹಾಗೆ ಅವನನ್ನು ಒಂದು ನಿರ್ಜನ ಪ್ರದೇಶಕ್ಕೆ ಕರೆದೊಯ್ದು ಕೊಲ್ಲುವ ಏರ್ಪಾಡಾಗುತ್ತದೆ. ನೋಯೆಗೆ ಕೂಡ ಇದರ ಬಗ್ಗೆ ಏನೂ ತಿಳಿದಿಲ್ಲ. ಅವರ ಮುಗ್ಧತೆಯ ಎದುರಿನಲ್ಲೇ ಈ ಬರ್ಬರ ಕೃತ್ಯ ನಡೆದುಹೋಗುತ್ತದೆ. ಇಕ್‌ಮೆಫ್ಯೂನ್‌ನನ್ನು ಕೊಲ್ಲಲು ಅದಕ್ಕೆ ಏರ್ಪಾಡಾದ ಕತ್ತಿ ಎತ್ತಿದಾಗ ಆತ ತನ್ನನ್ನು ಕೊಂದರು ಎಂದು ಒಕೊಂಕೊನ ಹತ್ತಿರ ಓಡುತ್ತಾನೆ. ಒಕೊಂಕೊ ತನ್ನ ಕತ್ತಿಯಿಂದಲೇ ಇಕ್‌ಮೆಫ್ಯೂನ್‌ನನ್ನು ಇರಿದು ಸಾಯಿಸುತ್ತಾನೆ. ಮುಂದೆ ಅನೇಕ ದಿನಗಳವರೆಗೆ ಇದರಿಂದ ಒಕೊಂಕೊ ಚಿತ್ತಕ್ಷೋಭೆಗೆ ಒಳಗಾದರೂ, ಇಕ್‌ಮೆಫ್ಯೂನ್‌ನ ಸಾವಿನಿಂದ ಹೆಚ್ಚು ಮಾನಸಿಕ ಆಘಾತಕ್ಕೆ ನೋಯೆ ಒಳಗಾಗುತ್ತಾನೆ. ಇಂತಹ ಧರ್ಮದ ಹೆಸರಿನಲ್ಲಿ ನಡೆಯುವ ಅಮಾನವೀಯ ಸಂಗತಿಗಳಿಗೆ ನೋಯೆ ಉತ್ತರ ಹುಡುಕಲು ಪ್ರಾರಂಭಿಸುತ್ತಾನೆ. ಇಕ್‌ಮೆಫ್ಯೂನ್‌ನನ್ನು

ಕೊಂದ ಬರ್ಬರ ಕೃತ್ಯ ನೋಯೆಯಲ್ಲಿ ಉಂಟುಮಾಡುವ ತುಮುಲಗಳಿಂದಾಗಿ ಆತ ಒಬ್ಬ ಜನಾಂಗ ದ್ವೇಷಿಯಾಗುತ್ತಾನೆ. ಬಿಳಿಯರ ಆಗಮನ ತರುವ ಹೊಸ ಧರ್ಮ ಇವುಗಳಿಗೆಲ್ಲ ಉತ್ತರ ಕೊಡಬಲ್ಲದು ಎಂದು ನೋಯೆ ತಿಳಿದು, ಅದಕ್ಕೆ ಆಕರ್ಷಿತನಾಗುತ್ತಾನೆ. ಇದು ಒಂದು ಹಂತದಲ್ಲಿ ವಸಾಹತುಶಾಹಿ ಆಡಳಿತ ಕ್ರಮ ದೇಶೀಯ ಜನಾಂಗದ ಮೇಲೆ ಧರ್ಮದ ಹೆಸರಿನಲ್ಲಿ ಉಂಟುಮಾಡುವ ಆಕ್ರಮಣ. ಇನ್ನೊಂದು ರೀತಿಯಲ್ಲಿ ಕೂಡ ಈ ಆಕ್ರಮಣ ನಡೆಯುತ್ತದೆ. ಬಿಳಿಯರು ಯುರೋಪಿಯಾಕ್ಕೆ ಬಂದ ತಕ್ಷಣವೇ ಚರ್ಚ್ ಕಟ್ಟಲು ನೆಲವನ್ನು ಕೇಳುತ್ತಾರೆ. ಇಲ್ಲಿಯ ಜನ ಅವರಿಗೆ 'ಅನಿಷ್ಟಕಾಡ' (Evil Forest) ನ್ನು ತೋರಿಸುತ್ತಾರೆ. ಅಲ್ಲಿ ಚರ್ಚ್ ಕಟ್ಟಿದರೆ ಕೆಲವೇ ದಿನಗಳಲ್ಲಿ ಅವರು ನಿರ್ನಾಮರಾಗುತ್ತಾರೆ ಎಂದು ನಂಬುತ್ತಾರೆ. ಈ 'ಅನಿಷ್ಟ ಕಾಡು' ಆಫ್ರಿಕಾದ ಸಂಸ್ಕೃತಿಯೊಳಗೇ ಬೇರು ಬಿಟ್ಟಿರುವ ಒಂದು ದಂತಕತೆ. ಆ ಸಂಸ್ಕೃತಿ ಜೀರ್ಣಿಸಿಕೊಳ್ಳಲಾರದ ಬದುಕಿನ ಅನೇಕ ಅಂಶಗಳಿವೆ. ಉದಾಹರಣೆಗೆ ಅವಳಿ ಮಕ್ಕಳ ಜನನ. ಅವಳಿ ಮಕ್ಕಳು ಹುಟ್ಟಿದ ತಕ್ಷಣ ಅವುಗಳನ್ನು ಈ 'ಅನಿಷ್ಟಕಾಡಿ'ಗೆ ದಬ್ಬಲಾಗುತ್ತದೆ. ಅವುಗಳ ಜನನ ಇಡೀ ಸಂಸ್ಕೃತಿಗೆ ಒಂದು ಅನಿಷ್ಟ ಇದ್ದ ಹಾಗೆ. ಅವುಗಳನ್ನು ಭೂಮಿದೇವತೆ ಸ್ವೀಕರಿಸುವುದಿಲ್ಲ. ಅವುಗಳು ಆ ಅನಿಷ್ಟ ಕಾಡಿನಲ್ಲೇ ಸತ್ತು ಕೊಳೆತು ಹೋಗಬೇಕು. ಇದೇ ರೀತಿ ಹೊಟ್ಟೆ ಉಬ್ಬರಿಸಿ ಸಾಯುವವರನ್ನು ಊರಿನಲ್ಲಿ ಸಾಯಗೊಡುವುದಿಲ್ಲ. ಅವರನ್ನು ಸಹ ಅನಿಷ್ಟ ಕಾಡಿಗೆ ದೂಡುತ್ತಾರೆ. ಏಕೆಂದರೆ ಹೊಟ್ಟೆ ಉಬ್ಬರಿಸುವುದು ಭೂಮಿ ದೇವತೆಗೆ ಹೇಸಿಗೆ ಉಂಟು ಮಾಡುವ ಅವಲಕ್ಷಣವಾದ್ದರಿಂದ ಅದರಿಂದ ಸಾಯುವವರಿಗೆ ಭೂಮಿದೇವತೆಯ ಮಡಿಲಿನಲ್ಲಿ ಜಾಗವಿಲ್ಲ. ಅವರು ಅನಿಷ್ಟಕಾಡಿನಲ್ಲೇ ಸತ್ತು ಕೊಳೆತು ನಾರಬೇಕು. ಇದಕ್ಕೆ ಸಂಬಂಧಪಟ್ಟ ಹಾಗೆ ಒಂದು ಸ್ವಾರಸ್ಯವಾದ ವಾಸ್ತವ ಸಂಗತಿ ಕೂಡ ಪ್ರಚಲಿತದಲ್ಲಿದೆ. ಒಬ್ಬ ಹೊಟ್ಟೆ ಉಬ್ಬರಿಸಿ ಸಾಯುತ್ತಿರಬೇಕಾದರೆ ಅವನನ್ನು ಅನಿಷ್ಟಕಾಡಿಗೆ ಒಯ್ದು ಬಿಟ್ಟುಬರುತ್ತಾರೆ. ಆತ ಬಹಳ ಗಟ್ಟಿಗನಾಗಿದ್ದು ತೆವಳುತ್ತಾ ಮತ್ತೆ ಮನೆಗೆ ವಾಪಾಸ್ಸಾದನಂತೆ. ಅವನನ್ನು ಅನಿಷ್ಟಕಾಡಿಗೆ ಮತ್ತೆ ಎಳೆದುಕೊಂಡು ಹೋಗಿ ಮರಕ್ಕೆ ಕಟ್ಟಿಹಾಕಿ ಬಂದರಂತೆ! ಹೀಗಾಗಿ ಈ ಅನಿಷ್ಟಕಾಡು ಈ ಎಲ್ಲ ತರಹದ ಅವಲಕ್ಷಣಗಳ ಬೀಡು. ಅದೊಂದು ಮಿಥ್ (Myth). ಬಿಳಿಯರು ಚರ್ಚ್ ಕಟ್ಟಿ ಅನೇಕ ದಿನಗಳಾದರೂ ಅವರಿಗೆ ಏನೂ ಸಂಭವಿಸುವುದಿಲ್ಲ. ಅವರ ನಿರ್ನಾಮಕ್ಕೆ ಕಾಯುತ್ತಿರುವ ದೇಶೀ ಜನರ ನಂಬಿಕೆಗಳಲ್ಲಿ ಇದರಿಂದಾಗಿ ಬಿರುಕು ಕಾಣಿಸಿಕೊಳ್ಳಲು ಶುರುವಾಗುತ್ತದೆ. ಹೊಸ ಧರ್ಮದ ಬಗ್ಗೆ ಅವರು ಉದಾತ್ತಭಾವ ತಳೆಯಲು ಪ್ರಾರಂಭಿಸುತ್ತಾರೆ. ದೇಶೀ ಜನರ ಅನೇಕ ನಂಬಿಕೆಗಳು, ಈ ತರಹದ ಮಿಥ್‌ಗಳು demythify ಆಗುತ್ತವೆ. ಹೀಗೆ ಉಂಟಾದ

'demythification'ದಿಂದಾಗಿ ಅವರ ಭಾವನೆಗಳ ಮೇಲೆ ಬಿಳಿಯರ ಹೊಸ ಧರ್ಮ ತನ್ನ ಆಕ್ರಮಣಶೀಲತೆಯನ್ನು ವ್ಯವಸ್ಥಿತವಾಗಿ ನಡೆಸುತ್ತದೆ. ದೇಶೀ ಧರ್ಮದಲ್ಲಿನ ಹಿಂಸೆ ಕೃತ್ಯಗಳಿಂದಾಗಿ ಬೇಸತ್ತಿದ್ದ ಜನರೆಲ್ಲಾ ಈ ಹೊಸ ಧರ್ಮವನ್ನು ಅಪ್ಪಿಕೊಳ್ಳುತ್ತಾರೆ. ಈ ರೀತಿ ವಸಾಹತುಶಾಹಿ ಆಡಳಿತ ಕ್ರಮ ನಿರ್ದಿಷ್ಟವಾದ ಉದ್ದೇಶದೊಂದಿಗೆ, ಅನಿರ್ಬಂಧಿತವಾಗಿ, ದೇಶೀ ಜನರ ಧಾರ್ಮಿಕ ಆಚರಣೆಯಲ್ಲಿಯೇ ಬೇರು ಬಿಟ್ಟಿದ್ದ ಮೂಢನಂಬಿಕೆಗಳನ್ನು ಸಮರ್ಥವಾಗಿ ಹೋಗಲಾಡಿಸಿ, ತನ್ನ ಧರ್ಮದ ಮಾನವೀಯ ನೆಲೆಗಳ ಉದಾರ ಧೋರಣೆಗಳನ್ನು, ಪಾಪಪುಣ್ಯಗಳ ತರತಮ ಪ್ರಜ್ಞೆಯನ್ನು ಯಶಸ್ವಿಯಾಗಿ ನೆಲೆಪೂರುವಂತೆ ಮಾಡುತ್ತದೆ.

ಕಾದಂಬರಿಯ ಮೊದಲ ಭಾಗದ ಅಂತ್ಯದಲ್ಲಿ ಒಕೊಂಕೊ ತನ್ನ ಊರಿಂದ ದೇಶಭ್ರಷ್ಟನಾಗಿ ಹೋಗಬೇಕಾಗುತ್ತದೆ. ಅವರ ಜನಾಂಗಕ್ಕೆ ಸೇರಿದ ಒಬ್ಬ ಶ್ರೇಷ್ಠವ್ಯಕ್ತಿ ಈಜಿಡೊ ಮೃತನಾಗಿರುತ್ತಾನೆ. ಅವನ ಶ್ರೇಷ್ಠತೆಯನ್ನು ಗಮನಿಸಿ, ಆ ಜನಾಂಗದ ಎಲ್ಲರೂ ಅವನ ಅಂತ್ಯಕ್ರಿಯೆಯಲ್ಲಿ ಪಾಲ್ಗೊಂಡಿರುತ್ತಾರೆ. ಈಜಿಡೊನ ಮಕ್ಕಳು ಅಂತಿಮನಮನ ಸಲ್ಲಿಸಲು ಸಾಂಪ್ರದಾಯಿಕ ಹಾಡು ಕುಣಿತಗಳಲ್ಲಿ ತೊಡಗಿರುತ್ತಾರೆ. ಒಕೊಂಕೊ ಕೂಡ ಈ ಅಂತ್ಯಕ್ರಿಯೆಯಲ್ಲಿ ಭಾಗವಹಿಸುತ್ತಿದ್ದಾನೆ. ಆಗ ಇದ್ದಕ್ಕಿದ್ದ ಹಾಗೆ ಅವನ ಕೋವಿ ಸಿಡಿದು ಈಜಿಡೊನ ಹದಿನಾರು ವರ್ಷದ ಮಗನನ್ನು ಕೊಲ್ಲುತ್ತದೆ. ಈ ತರಹದ ಸಾವು ಎಂತಹ ದೊಡ್ಡ ಪ್ರಮಾದವಾಗುತ್ತದೆಂದರೆ ಇಡೀ ಆಫ್ರಿಕಾದ ಸಂಸ್ಕೃತಿಯಲ್ಲಿ ಹಿಂದೆಂದೂ ಆಗಿರದ ಒಬ್ಬ ಹೆಣ್ಣಿಗ ಮಾಡಬಹುದಾದ ಘೋರ ಅಪರಾಧವಾಗುತ್ತದೆ. ಇದಕ್ಕೆ ಪ್ರಾಯಶ್ಚಿತ್ತವಾಗಿ ಒಕೊಂಕೊ ಏಳು ವರ್ಷಗಳ ಕಾಲ ತನ್ನ ಊರಿಂದ ದೇಶಭ್ರಷ್ಟನಾಗಿರಬೇಕಾಗುತ್ತದೆ.

ಒಕೊಂಕೊನ ಇಡೀ ಬದುಕು ಇಂತಹ ಘೋರ ಆಕಸ್ಮಿಕಗಳ ತೂಗುಯ್ಯಾಲೆಯಲ್ಲಿ ಮತ್ತು ಬೇಕೆಂತಲೇ ಮಾಡುವ ಕೃತ್ಯಗಳಲ್ಲಿ ನಡೆಯುತ್ತದೆಂಬುದನ್ನು ಗಮನಿಸಬೇಕು.

ಒಕೊಂಕೊ ಈ ಘಟನೆಯ ತರುವಾಯ ತನ್ನ ತವರೂರಾದ ಬ್ಯಾಂಟಕ್ಕೆ ತೆರಳುತ್ತಾನೆ. ತನ್ನ ಅಜ್ಞಾತವಾಸದ ಎರಡನೇ ವರ್ಷದಲ್ಲಿದ್ದಾಗ ಅವನ ಆಪ್ತ ಸ್ನೇಹಿತ ಒಬೀರಿಕಾ ಅವನನ್ನು ನೋಡಲು ಬರುತ್ತಾನೆ. ಆತ ಯುಮೋಫಿಯಾಕ್ಕೆ ಬಿಳಿಯರ ಆಗಮನವಾದ ವಾರ್ತೆಯನ್ನು ಒಕೊಂಕೊಗೆ ತಿಳಿಸುತ್ತಾನೆ. ಯುಮೋಫಿಯಾದ ಪಕ್ಕದ ಊರುಗಳಲ್ಲಿ ಒಂದಾದ 'ಅಬೇಮ' ಹೇಗೆ ಸಂಪೂರ್ಣವಾಗಿ ನಾಶವಾಯಿತು ಎಂಬುದನ್ನು ಹೇಳುತ್ತಾನೆ. ಒಬ್ಬ ಬಿಳಿಯ ತನ್ನ ಕಬ್ಬಿಣದ ಕುದುರೆಯ ಮೇಲೆ (ದೇಶೀ ಜನ ಸೈಕಲ್‌ಗೆ ಕಬ್ಬಿಣದ ಕುದುರೆ ಎಂದು ಕರೆಯುತ್ತಾರೆ) ಈ ಊರಿಗೆ ಬಂದಾಗ ಜನರು

ಅವನನ್ನು ಕೊಂದು ಅವನ ಕಂದುರೆಯನ್ನು ಮರಕ್ಕೆ ಕಟ್ಟಿ ಹಾಕುತ್ತಾರೆ. ಇದರಿಂದ ಇಡೀ ಊರು ಬಿಳಿಯರ ದಾಳಿಗೆ ತುತ್ತಾಗಿ ನಾಶವಾಗುತ್ತದೆ. ಈ ಕಥೆ ಕೇಳುತ್ತಿದ್ದ ಹಾಗೆ ಒಕೊಂಕೊ ಆವೇಶಭರಿತನಾಗುತ್ತಾನೆ. ಆದರೆ ಒಬೀರಿಕ ಈ ಘಟನೆಯಿಂದಾಗಿ ಬಹಳ ದಿಗಿಲುಗೊಂಡಿರುವುದು ಕಂಡುಬರುತ್ತದೆ.

ಮತ್ತೆ ಎರಡು ವರ್ಷಗಳ ನಂತರ ಒಬೀರಿಕ ಒಕೊಂಕೊನನ್ನು ಭೇಟಿ ಮಾಡುತ್ತಾನೆ. ಬಿಳಿಯರು ಯುಮೋಫಿಯಾಕ್ಕೆ ಆಗಮಿಸಿ, ತಮ್ಮ ಚರ್ಚುಗಳನ್ನು ಕಟ್ಟಿ ಅನೇಕ ಜನರನ್ನು ತಮ್ಮ ಧರ್ಮಕ್ಕೆ ಸೆಳೆದುಕೊಂಡಂಥ ಸಂದರ್ಭದಲ್ಲಿ ಈ ಭೇಟಿ ನಡೆಯುತ್ತದೆ. ಅತ್ಯಂತ ಆಶ್ಚರ್ಯಕರವಾದ ಸಂಗತಿಯೆಂದರೆ ಒಕೊಂಕೊನ ಮಗ ನೋಯೆ ಕೂಡ ಬಿಳಿಯರ ಜೊತೆ ವ್ಯವಹರಿಸತೊಡಗಿದ್ದು. ನೋಯೆ ಹೊಸ ಧರ್ಮಕ್ಕೆ ಆಕರ್ಷಿತನಾಗಿ ಒಕೊಂಕೊ ತನ್ನ ಅಪ್ಪ ಎಂಬುದನ್ನು ಕೂಡ ನಿರಾಕರಿಸುತ್ತಾನೆ. ತಾನು ಬಿಳಿಯರು ಆರಂಭಿಸಿರುವ ಶಾಲೆಗೆ ಹೋಗಲು ನಿರ್ಧರಿಸುತ್ತಾನೆ.

ಒಕೊಂಕೊನನ್ನು ಬಹಳ ಆಪ್ತವಾಗಿ "ಬೆಂಕಿಯ ಜ್ವಾಲೆ" ಎಂದು ಅವನ ಜನ ಕರೆಯುತ್ತಿದ್ದರು. ಆದರೆ, ಅವನಿಗೆ ಬಿಳಿಯರ ಜೊತೆ ಹೋರಾಡಲು ಸಾಧ್ಯವಾಗದೆ ಹೊಂದಾಣಿಕೆ ಮಾಡಿಕೊಳ್ಳಲು ಮನಸ್ಸಾಗದೆ ಒಂದು ವಿಚಿತ್ರ ಸ್ಥಿತಿ ಉಂಟಾಗುತ್ತದೆ. ಒಕೊಂಕೊ ಏಳು ವರ್ಷಗಳ ಕಾಲ ದೇಶಭ್ರಷ್ಟನಾಗಿದ್ದು, ವಾಪಾಸ್ಸು ಬರುವ ಹೊತ್ತಿಗೆ ಅವನ ಸಂಸ್ಕೃತಿಯಲ್ಲಿಯೇ ಅನೇಕ ಬದಲಾವಣೆಗಳಾಗಿವೆ. ಬಿಳಿಯರ ಹೊಸ ಧರ್ಮದ ಆಕರ್ಷಣೆಗೆ ತುತ್ತಾಗಿರುವ ದೇಶೀಯ ಜನ ಒಂದು ಕಡೆಗಾದರೆ ಇನ್ನೊಂದು ಕಡೆ ಆತ ಹಿಂದೆ ಆಕ್ರಮಿಸಿದ್ದ ತನ್ನ ಸಂಸ್ಕೃತಿಯಲ್ಲಿನ ಜಾಗವನ್ನು ಬೇರೆಯವರು ಆಕ್ರಮಿಸಿದ್ದಾರೆ. ಒಕೊಂಕೊನನ್ನು ಬಹಳ ಮಟ್ಟಿಗೆ ಅಲ್ಲಿಯ ಜನ ಮರೆತಿದ್ದಾರೆ. ಅವನ ವ್ಯಕ್ತಿತ್ವದ ವಿಶೇಷಗಳೇನಿದ್ದರೂ ಅವನು ದೇಶಭ್ರಷ್ಟನಾಗುವುದಕ್ಕೆ ಮುಂಚೆ ಗುರುತಿಸಲ್ಪಡುತ್ತಿದ್ದವು. ಒಕೊಂಕೊನ ಅನುಪಮ ಸ್ಥಿತಿಯಲ್ಲಿ ಜನ ಅವನನ್ನು ಮರೆತಿದ್ದಾರೆ. ಒಕೊಂಕೊ ಏಳು ವರ್ಷಗಳ ನಂತರ ಯುಮೋಫಿಯಾಕ್ಕೆ ವಾಪಾಸ್ಸಾದಾಗ ಇವೆಲ್ಲವೂ ಅವನಿಗೆ ಗೊತ್ತಾಗುತ್ತದೆ. ತಾನು ನಡೆಸಬೇಕೆಂದುಕೊಂಡಿದ್ದ ವಿಚಾರಗಳೆಲ್ಲ ಈಗ ಅವನಿಗೆ ಹುಸಿಯಾಗಿ ಕಾಣುತ್ತವೆ. ಹೊಸ ಧರ್ಮದ ವಿರುದ್ಧ ಆತ ಆಲೋಚಿಸುವಷ್ಟು ತೀವ್ರವಾಗಿ ಯಾರೂ ಯೋಚಿಸುತ್ತಿಲ್ಲ. ಹೊಸ ಧರ್ಮ ತಂದಿರುವ ಹೊಸತನದ ಬದುಕಿನ ಕ್ರಮ ಆ ಜನರ ಸಂಸ್ಕೃತಿಯ ಮೇಲೆ ಮಾಡಿರುವ ಪರಿಣಾಮ ಎಷ್ಟು ದೊಡ್ಡದು ಎಂಬುದು ಒಕೊಂಕೊಗೆ ಮನವರಿಕೆಯಾಗುತ್ತದೆ. ನಿಧಾನವಾಗಿ ಬಿಳಿಯರು ಚರ್ಚ್ ಜೊತೆಗೆ ಒಂದು ಮಾರುಕಟ್ಟೆ ಅರ್ಥವ್ಯವಸ್ಥೆಯನ್ನು ಯೋಜಿಸಿದ್ದಾರೆ. ತಾಳೆ ಎಣ್ಣೆ ಮುಂತಾದವುಗಳನ್ನು ಮಾರಾಟ ಮಾಡುವ ಕೇಂದ್ರವನ್ನು ಅವರು ಈಗ ಶುರು

ಮಾಡಿದ್ದಾರೆ. ಇದರಿಂದಾಗಿ ಯುಮೋಫಿಯಾಕ್ಕೆ ಹೆಚ್ಚು ಹೆಚ್ಚು ಹಣ ಬರತೊಡಗುತ್ತದೆ. ಹೊಸ ಶ್ರೀಮಂತ ವರ್ಗವೊಂದು ಸೃಷ್ಟಿಯಾಗಲು ಇದು ನೆರವಾಗುತ್ತದೆ. ಮನುಷ್ಯನ ಸಂಬಂಧಗಳಲ್ಲಿ ಹೊಸ ಆರ್ಥಿಕ ವ್ಯವಸ್ಥೆಯಿಂದಾಗಿ ಅನೇಕ ಬದಲಾವಣೆಗಳು ಶುರುವಾಗುತ್ತದೆ ಒಕೊಂಕೊ ಸ್ವಲ್ಪ ಮಟ್ಟಿಗೆ ಬಿಳಿಯರ ವಿರುದ್ಧ ಹೋರಾಡಲು ತನ್ನ ಜನರನ್ನು ಸಂಘಟಿಸಲು ಯತ್ನಿಸುತ್ತಾನೆ. ಅದರ ಪರಿಣಾಮವಾಗಿ ಎಲ್ಲರೂ ಸೇರಿ ಚರ್ಚ್ ಒಂದನ್ನು ನಾಶಪಡಿಸುತ್ತಾರೆ. ಈಗ ಒಂದು ಆಡಳಿತ ವ್ಯವಸ್ಥೆ ಸಹ ಅಲ್ಲಿ ಪ್ರಾರಂಭವಾಗಿದೆ. ಕ್ರಿಶ್ಚಿಯನ್ ಧರ್ಮವನ್ನು ಜನಪ್ರಿಯಗೊಳಿಸಲು ಮತ್ತು ಕ್ರಿಶ್ಚಿಯನ್ ಧರ್ಮಗುರುಗಳನ್ನು ದೇಶೀ ಜನರಿಂದ ರಕ್ಷಿಸಲು ಆಲ್ಲೊಬ್ಬ ಜಿಲ್ಲಾಧಿಕಾರಿ ನೇಮಕಗೊಂಡಿದ್ದಾನೆ. ಹೊಸ ಧರ್ಮವನ್ನು ದೇಶೀ ಜನರಿಗೆ ಭೋಧಿಸುವಲ್ಲಿ ಉಂಟಾಗಬಹುದಾದ ತೊಂದರೆಗಳನ್ನು ನಿವಾರಿಸುವಲ್ಲಿ ಈ ಆಡಳಿತ ವ್ಯವಸ್ಥೆ ಸಕ್ರಿಯ ಪಾತ್ರವಹಿಸುತ್ತದೆ.

ಒಕೊಂಕೊ ಮತ್ತಿತರರು ಚರ್ಚನ್ನು ನಾಶಪಡಿಸಿದ ಕೆಲವೇ ದಿನಗಳಲ್ಲಿ ಆ ಜಿಲ್ಲಾಧಿಕಾರಿ ತನ್ನನ್ನು ಭೇಟಿ ಮಾಡುವಂತೆ ಹೇಳಿಕಳಿಸುತ್ತಾನೆ. ಒಕೊಂಕೊನನ್ನು ಒಳಗೊಂಡ ಆರು ಜನರ ನಿಯೋಗ ಅವನನ್ನು ಭೇಟಿ ಮಾಡುತ್ತದೆ. ತಾನು ಹೇಗೆ ಶಾಂತಿಪ್ರಿಯವಾದ ಆಡಳಿತ ವ್ಯವಸ್ಥೆಯನ್ನು ತಂದಿದ್ದೇನೆಂದು ವಿವರಿಸಿ, ಆ ಜಿಲ್ಲಾಧಿಕಾರಿ ಅವರೆಲ್ಲ ಸಹಕರಿಸಬೇಕೆಂದು ಕೇಳಿಕೊಳ್ಳುತ್ತಾನೆ. ಈ ಆಡಳಿತ ವ್ಯವಸ್ಥೆಯ ಜೊತೆಗೇ ಒಂದು ನ್ಯಾಯಾಲಯ ವ್ಯವಸ್ಥೆಯನ್ನು ಜಾರಿಗೆ ತಂದಿದ್ದೇನೆಂದು ತಿಳಿಸುತ್ತಾನೆ. ಊರ ಜನರೆಲ್ಲಾ ಚರ್ಚನ್ನು ನಾಶಮಾಡಿ ಬಿಳಿಯರ ಮೇಲೆ ಅತ್ಯಾಚಾರ ಮಾಡುತ್ತಿರುವುದಾಗಿಯೂ, ಅದನ್ನೆಲ್ಲಾ ನಿಯಂತ್ರಿಸಲು ತನ್ನ ಆಡಳಿತ ವ್ಯವಸ್ಥೆ ಏರ್ಪಾಡುಗಳನ್ನು ಮಾಡುವುದೆಂದೂ, ಆದಕ್ಕೆ ಸಂಬಂಧಪಟ್ಟ ವಿವಾದಗಳನ್ನು ಬಗೆಹರಿಸಲು ನ್ಯಾಯಾಲಯ ವ್ಯವಸ್ಥೆ ಸಹಕರಿಸುವುದೆಂದು, ಆತ ವಿವರಿಸುತ್ತಾನೆ. ಆ ಆರು ಜನರನ್ನು ಲಾಕಪ್‌ನಲ್ಲಿ ಹಾಕಿ, ಅವರು ಚರ್ಚ್ ನಾಶಪಡಿಸಿದ್ದಕ್ಕಾಗಿ ಇನ್ನೂರೈವತ್ತು ಚೀಲ ನಾಣ್ಯವನ್ನು ದಂಡವಾಗಿ ಕೊಡಬೇಕೆಂದು ಹೇಳುತ್ತಾನೆ. ಯುಮೋಫಿಯಾದ ಜನರೆಲ್ಲಾ ಸೇರಿ ಆ ಹಣವನ್ನು ಜಿಲ್ಲಾಧಿಕಾರಿಗೆ ಕೊಡಲು ಒಪ್ಪಿ, ಅವರನ್ನೆಲ್ಲಾ ಬಿಡುಗಡೆಗೊಳಿಸುತ್ತಾರೆ.

ಈ ಘಟನೆಯಿಂದಾಗಿ ಒಕೊಂಕೊಗೆ ಅತ್ಯಂತ ತೀವ್ರತರವಾದ ವಿಷಾದವಾಗುತ್ತದೆ. ಬಿಳಿಯರ ವಿರುದ್ಧ ಇಡೀ ಯುಮೋಫಿಯಾ ಯುದ್ಧ ಹೂಡಬೇಕೆಂದು ಅವನ ಆಸೆ. ಆದರೆ, ಅಲ್ಲಿಯ ಜನರ ಮನಸ್ಥಿತಿ ಬೇರೆಯಂದೇ ಆಗಿದೆ. ಯುಮೋಫಿಯಾದ ಜನರೆಲ್ಲ ಒಂದು ಸಾರಿ ಸಭೆ ಸೇರಿ ಹೊಸ ಆಡಳಿತ ಕ್ರಮದ ಬಗ್ಗೆ ಚರ್ಚೆ

ನಡೆಸುತ್ತಿರಬೇಕಾದರೆ, ಬಿಳಿಯರ ವಿಶೇಷ ದೂತನೊಬ್ಬ ಬಂದು, ಸಭೆಯನ್ನು ನಿಲ್ಲಿಸಲು ಸೂಚಿಸುತ್ತಾನೆ. ಅವನಿಗೆ ಮತ್ತು ಅಲ್ಲಿನ ಜನರಿಗೆ ವಾಗ್ವಾದಗಳು ಶುರುವಾಗಿ, ಒಕೊಂಕೊ ಕುಪಿತಗೊಂಡು ಆ ದೂತನ ತಲೆ ಹಾರಿಸುತ್ತಾನೆ. ಇದನ್ನು ಕೂಡ ಅವನ ಜನ ಬೆಂಬಲಿಸದೆ, 'ಒಕೊಂಕೊ ಏಕೆ ಹೀಗೆ ಮಾಡಿದ?' ಎಂದು ಮಾತಾಡಲು ತೊಡಗುತ್ತಾರೆ.

ಒಕೊಂಕೊ ಮಾಡಿದ ಈ ಕೊಲೆಯನ್ನು ಬಿಳಿಯರು ಮನ್ನಿಸುವುದಿಲ್ಲವೆಂದು ಎಲ್ಲರಿಗೂ ಗೊತ್ತು. ಒಕೊಂಕೊನನ್ನು ಬಂಧಿಸಲು ಸ್ವತಃ ಜಿಲ್ಲಾಧಿಕಾರಿಯೇ ಬರುತ್ತಾನೆ. ಆದರೆ ಒಕೊಂಕೊ ಆತ್ಮಹತ್ಯೆ ಮಾಡಿಕೊಂಡಿದ್ದಾನೆ. ಅವನಿಗೆ ಬೇರೆ ದಾರಿಯೇ ಇರಲಿಲ್ಲ. ಏಕೆಂದರೆ ಒಕೊಂಕೊ ತನ್ನ ಊರಲ್ಲಿಯೇ ಪರಸ್ಥಳದವನಾಗಿ, ಬಿಳಿಯರ ಆಡಳಿತದ ವಿರುದ್ಧ ಹೋರಾಡುವ ಏಕಾಂಗಿಯಾಗಿ ತನ್ನನ್ನು ಬಂಧಿಸಲು ಬಿಳಿಯರಿಗೆ ಅವಕಾಶ ಕೊಡದ ಹಾಗೆ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಇದಕ್ಕೆ ಆ ಜನಾಂಗದ ಸಾಂಸ್ಕೃತಿಕ ಕಾರಣಗಳೂ ಇವೆ. ಏಕೆಂದರೆ ಆತ್ಮಹತ್ಯೆ ಮಾಡಿಕೊಂಡವನನ್ನು ಆ ಜನರು ಅಂತ್ಯಸಂಸ್ಕಾರಕ್ಕಾಗಿ ಒಯ್ಯುವುದಿಲ್ಲ. ಒಕೊಂಕೊನ ಉದ್ದೇಶ ಕೂಡ ಅದೇ ಆಗಿರಬೇಕು. ಒಟ್ಟಾರೆ, ಹೊಸ ಆಡಳಿತ ಕ್ರಮವನ್ನು ಒಪ್ಪಿಕೊಳ್ಳಲಾಗದ, ತನ್ನ ಜನಾಂಗದಿಂದ ದೂರ ಸರಿಯಬೇಕಾದ ಗೊಂದಲದಲ್ಲಿ ಒಕೊಂಕೊ ಸಾಯುತ್ತಾನೆ.

ನೇತಾಡುತ್ತಿರುವ ಒಕೊಂಕೊನ ದೇಹವನ್ನು ಒಬೀರಿಕ ಜಿಲ್ಲಾಧಿಕಾರಿಗೆ ತೋರಿಸಿ, ಹೇಳುತ್ತಾನೆ. "ಅವನೊಬ್ಬ ಅತೀ ದೊಡ್ಡ ಮನುಷ್ಯನಾಗಿದ್ದ; ನೀವೇ ಅವನಿಗೆ ಈ ಅವಸ್ಥೆಯನ್ನು ತಂದೊಡ್ಡಿದ್ದೀರಿ! ಈಗ ಅವನನ್ನು ನಾಯಿಯನ್ನು ಹೂಳುವ ತರಹ ಹೂಳಲಾಗುತ್ತದೆ." (The African Trilogy, P. 167.)

ಆಫ್ರಿಕಾದ ನಾಡಿಗೆ ನಾಗರೀಕತೆ ತರುವಲ್ಲಿ ಈ ಜಿಲ್ಲಾಧಿಕಾರಿ, ಅನೇಕ ಪಾಠಗಳನ್ನು ಕಲಿತಿದ್ದಾನೆ. ಮೊದಲನೆಯದಾಗಿ ಸ್ವತಃ ತಾನೇ ಬಂದು ನೇತಾಡುತ್ತಿರುವ ಶವವನ್ನು ಕೆಳಗಿಳಿಸಲು ಕೈಹಾಕಬಾರದಾಗಿತ್ತು ಎಂದು ಆತ ತಿಳಿಯುತ್ತಾನೆ. ಹಾಗೆ ಮಾಡಿದರೆ ಅಲ್ಲಿಯ ಜನ ಬಹಳ ಕೀಳಾಗಿ ನೋಡುತ್ತಾರೆ. ತಾನು ಬರೆಯಲಿರುವ ಪುಸ್ತಕದಲ್ಲಿ ಈ ವಿಚಾರಗಳಿಗೆ ಹೆಚ್ಚು ಒತ್ತು ಕೊಡಬೇಕು ಎಂದು ತಿಳಿಯುತ್ತಾನೆ.

ಒಕೊಂಕೊ ತನ್ನ ಸಮುದಾಯದ ಜನರ ಹೊಸ ಧರ್ಮದ ಬಗೆಗೆ ಉಂಟಾಗಿರುವ ಧೋರಣೆಗಳಿಂದಾಗಿ ಜಿಗುಪ್ಸೆ ಹೊಂದಿ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಬಿಳಿಯರ ಜೊತೆ ಉಳಿದವರಿಗೆ ಸಾಧ್ಯವಾಗುವ ಸಂಪರ್ಕ ಇವನಿಗೆ ಸಾಧ್ಯವಾಗುವುದಿಲ್ಲ. ಅವನ ಇಡೀ ಬದುಕು ತನ್ನ ವ್ಯಷ್ಟಿಯ ಜೊತೆ ಸಮಷ್ಟಿಯನ್ನು ಕರೆದೊಯ್ಯುವ ದ್ವಂದ್ವದಲ್ಲೇ ದುರಂತಕ್ಕೀಡಾಗುತ್ತದೆ.

"Things Fall Apart" ಕಾದಂಬರಿಯನ್ನು 'Archetypal' ಕಾದಂಬರಿ ಎಂದು ಕರೆದವರಿದ್ದಾರೆ. (The Emergence of African Fiction by Charles R. Larson, P. 27.) ಏಕೆಂದರೆ ಸಂಪ್ರದಾಯಸ್ಥ ಆಫ್ರಿಕನ್ ಸಮಾಜದ ಅವನತಿಯನ್ನು ಎಲ್ಲ ಸ್ಥರಗಳಲ್ಲಿ ಸಮಗ್ರವಾಗಿ ಹಿಡಿದಿರುವ ಇನ್ನೊಂದು ಕಾದಂಬರಿ ಆಫ್ರಿಕಾದ ಸಾಹಿತ್ಯದಲ್ಲಿಲ್ಲ. ಹಳತು ಹೊಸತುಗಳ ಸಂಘರ್ಷ ಮತ್ತು ವೈದೃಶ್ಯಗಳಲ್ಲಿ ವ್ಯೈದಾಳುವ ಈ ಕೃತಿ ಇಡೀ ಆಫ್ರಿಕಾದ ಸಂಸ್ಕೃತಿಯ ಸಮಗ್ರ ವಿಶ್ಲೇಷಣೆಯಾಗಿದೆ. ಇಂಗ್ಲಿಷ್ ವಿದ್ಯಾಭ್ಯಾಸದಿಂದ ಉಂಟಾಗಬಹುದಾದಂತಹ ವಿಮೋಚನೆ (ನೋಯೆ ಇಂಗ್ಲಿಷ್ ಶಾಲೆಗೆ ಸೇರುವುದಕ್ಕೆ ತಹತಹಿಸುವುದನ್ನು ನೆನಪಿಸಿಕೊಳ್ಳಬಹುದು) ವಸಾಹತುಶಾಹಿ ಆಡಳಿತ ಕ್ರಮ ದೇಶೀ ಜನಾಂಗಕ್ಕೆ ತಂದುಕೊಡುವುದು ಆದರ್ಶಪ್ರಾಯವಾಗಿ ಕಂಡರೆ ಅದು ಸಹಜವೇ ಆಗಿದೆ. ಆಫ್ರಿಕಾದ ಜನಾಂಗ ಪರಂಪರಾಗತವಾಗಿ ರೂಢಿಸಿಕೊಂಡಿರುವ ಮೌಲ್ಯಗಳನ್ನು ಪ್ರತಿರೋಧಿಸುವ ತಾತ್ವಿಕ ಆಲೋಚನಾ ಕ್ರಮವನ್ನು ಹುಟ್ಟುಹಾಕುವುದೇ ಕಲೋನಿಯಲ್ ಆಡಳಿತದ ವೈವಿಧ್ಯಗಳಲ್ಲಿ ಒಂದು. ಅಚೆಬೆ ಕೂಡ ಹೊಸ ಆಡಳಿತ ಕ್ರಮ ತರಬಹುದಾದಂತಹ ಇತ್ಯಾತ್ಮಕ ಅಂಶಗಳ ವಿರೋಧಿಯಲ್ಲ. ಕಾದಂಬರಿಯ ನಿರೂಪಕನ ಮನಸ್ಸು ಕೂಡ ಆ ದಿಸೆಯಲ್ಲೇ ಕೆಲಸ ಮಾಡುತ್ತದೆ. ಆದ್ದರಿಂದಲೇ ಒಕೊಂಕೊಗೆ 'ante-thesis' ಒಬ್ಬ ನೋಯೇ ಇದ್ದಾನೆ.

"Things Fall Apart" ಕಾದಂಬರಿಯ ನಿರೂಪಣಾ ತಂತ್ರದ ಬಗ್ಗೆ ಕೆಲವು ಮಾತುಗಳನ್ನು ಹೇಳಬೇಕು. ಇಲ್ಲಿನ ಪಾತ್ರಗಳು ನಡೆಸುವ ಸಂವಾದವೆಲ್ಲ ನಾಣ್ಣುಡಿಗಳ ಮುಖಾಂತರವೇ. ಇಲ್ಲಿನ ಎಲ್ಲಾ ಪಾತ್ರಗಳು ಆಫ್ರಿಕಾದ ಸಂಸ್ಕೃತಿಯ ವಿಶೇಷಗಳಲ್ಲೊಂದಾದ ಗಾದೆಯ ಮಾತುಗಳನ್ನು ಯಥೇಚ್ಛವಾಗಿ ಬಳಸುತ್ತವೆ. ಅವನ್ನು ಅಚೆಬೆ ಬಹಳ ಸಮರ್ಥವಾಗಿ ನಿರ್ವಹಿಸಿರುವುದರಿಂದಲೇ ಕಾದಂಬರಿಗೆ ಒಂದು 'ದೇಶೀತನ' ಲಭ್ಯವಾಗಿದೆ. ಇದರ ಜೊತೆಗೆ ಈಬೋ ಸಂಸ್ಕೃತಿಯಲ್ಲಿಯೇ ಹಾಸುಹೊಕ್ಕಾಗಿರುವ ಕಥೆಗಳು, ಉಪಕಥೆಗಳು, ಕಾದಂಬರಿಯ ಉದ್ದಕ್ಕೂ ಧಾರಾಳವಾಗಿ ಸಿಗುತ್ತವೆ. ಆದ್ದರಿಂದ ಈ ಕಾದಂಬರಿಯಲ್ಲಿ ಕಾಣುವ ಸಮಸ್ಯೆಗಳು ಕೇವಲ ಸಾಮಾಜಿಕವಾಗಿರದೇ, ಇಡೀ ಸಂಸ್ಕೃತಿಯ ಶೋಧನೆಗಳಾಗಿವೆ. ಈ ಕಾರಣಕ್ಕಾಗಿಯೆ ಈ ಕಾದಂಬರಿಯನ್ನು ಒಂದು ಮಹಾ ಕಾವ್ಯ (Epic) ವೆಂದು ತರ್ಕಿಸಿರುವುದು ಸರಿಯಾಗಿಯೇ ಇದೆ.

(ಮುಂದಿನ ಸಂಚಿಕೆಗೆ)

# ಬರೆಯದ ಕವಿತೆಗಳೇ

ಬರೆಯುಂದ ಕವಿತೆಗಳೇ ಮರವಾಗಲಿ
ಅಸಹಾಯಕ ಮರಗಳ ಕೊರಳು ಉರುಳುವಾಗ

ಬರೆಯದ ಕವಿತೆಗಳೇ ಮಳೆಯಾಗಲಿ
ಬರಗಾಲ ಬಾಗಿಲಲ್ಲಿ ವಾಮನನಾದಾಗ

ಬರೆಯದ ಕವಿತೆಗಳೇ ಗಿರಿಯಾಗಲಿ
ಗಿರಿಗಳನ್ನು ಹತ್ತಲಾಗದೆ ನಿಡುಸುಯ್ಯುವಾಗ

ಬರೆಯದ ಕವಿತೆಗಳೇ ಮಕ್ಕಳಾಗಲಿ
ಮಕ್ಕಳು ಕಿಂಡರ್‌ಗಾರ್ಟನ್ನುಗಳಲ್ಲಿ ಬಂಧಿಗಳಾದಾಗ

ಬರೆಯದ ಕವಿತೆಗಳೇ ಅತಿಥಿಗಳಾಗಲಿ
ಅತಿಥಿಗಳಿಲ್ಲದೆ ನಾನು ಪರಕೀಯನಾದಾಗ

ಬರೆಯದ ಕವಿತೆಗಳೇ ನನ್ನ ಕಣ್ಣೀರಾಗಲಿ
ನನ್ನ ಕಣ್ಣೀರನ್ನು ಯಾರಿಗೂ ಕೊಡೆನೆಂದಾಗ

ಬರೆಯದ ಕವಿತೆಗಳೇ ನನ್ನ ಕವಿತೆಗಳಾಗಲಿ
ಕವಿತೆಗಳೇ ನಿಜವಾದ ನನ್ನ ಪ್ರತಿಸ್ಪರ್ಧಿಯಾದಾಗ

— ಡಾ|| ನಾ. ಮೊಗಸಾಲೆ

ಡಾ|| ನಾ. ಮೊಗಸಾಲೆ, ಕಾಂತಾವರ, ದ.ಕ.-574 129

# ಹದ್ದು ಮತ್ತು ಜೀಮೂತ

– 1 –

ರಕ್ಕಸ ಕೊಕ್ಕಿನ ಹದ್ದು: ಬೆಳೆದು
ಬಲಗೊಂಡು ನಿಂತಿದೆ ಎದ್ದು ಸೆಡ್ಡು ಹೊಡೆದು
ರೆಕ್ಕೆಗಳು ಮುಗಿಲಗಲ ಚಾಚಿ ಭಯ ಹುಟ್ಟಿಸುತ್ತವೆ.
ಸುತ್ತ ಬಿದ್ದಿರುವ, ಬಿದ್ದು ಬೆಟ್ಟವಾಗಿರುವ
ಸರ್ಪಗಳ ಮೂಳೆರಾಶಿ; ಮೈ ಬೆವರೊಡೆಯುತ್ತದೆ
ತ್ಯಾಗ ತತ್ತರಿಸಿ ದುಃಖದ ರಾಗ ಒತ್ತರಿಸುತ್ತದೆ.

– 2 –

ಯಾಕಾದರೂ ಒಪ್ಪಿಕೊಂಡೆನೋ; ಅದೂ ಅನ್ಯರಿಗಾಗಿ
ಸಾಯುವುದು ಸುಲಭವಲ್ಲವೆಂದು ಈಗನ್ನಿಸುತ್ತಿದೆ
ಅದೂ ಈ ಭಯಂಕರ ಹದ್ದಿನ ಕೊಕ್ಕಿನಲ್ಲಿ ನರಳಿ ನರಳಿ
ಸಾಧ್ಯವೇ ಇಲ್ಲ; ಅದರ ನೆನಪೇ ಭಯಂಕರ ಭೂತ ನೆರಳು,
ಕೆಂಪು ವಧವಸ್ತ್ರವ ಸರ್ರನೆ ಮುಖದ ಮೇಲೆಳೆದು
ಸಾವಿಂದ, ಸಾವ ನೋವಿಂದ, ನೋವ ನೆನಪಿಂದ
ದೂರವಾಗಿ ಒಂದರೆಕ್ಷಣ ಮರೆಯಾಗಲೆತ್ನಿಸುತ್ತೇನೆ.

– 3 –

"ಜೀಮೂತ ಜೀಮೂತ ಜೀಮೂತವಾಹನಾ"
— ಎಂಬ ಅಪ್ಪ ಅವ್ವನ ಕೂಗು ಪ್ರತಿ ಕೂಗಾಗಿ
ಸುತ್ತುವರಿದು ಬೆಟ್ಟಗುಟ್ಟಗಳೊಳಗೆ ತಟ್ಟುತ್ತದೆ
ಮೂಳೆರಾಶಿಯ ಅಂತರ್ಯ ಬೆದಕಿ ಕೆದಕುತ್ತದೆ
ಭಯ ಚಿಗುರಿ ಒನಕೆ ಕಬ್ಬಿಣದ ಕೊಂಬೆಗಳಾಗಿ
ಒಳಗೊಳಗೆ ನನ್ನನ್ನೂ, ನನ್ನಂತಿರುವ ನನ್ನೆದೆಯನ್ನೂ ಕುಟ್ಟುತ್ತದೆ.

---

ಎಲ್.ಎನ್. ಮುಕುಂದರಾಜ್, ನಂ. 5, 1ನೇ ತಿರುವು, ನಾಗಪ್ಪ ಬೀದಿ, ಅರಮನೆ ಗುಟ್ಟಹಳ್ಳಿ
ಬೆಂಗಳೂರು-560 003

– 4 –

ಮಂದ ಮಂದವಾಗಿ ಬೀಸುವ ಮಾರುತದಲ್ಲಿ
ಮಡದಿ ಮಲಯಮತಿಯ ಮಧುರ ನೆನಪು
ಕಡಲ ಕಡೆಯಿಂದ ಅಲೆ ಕಡೆ ಕಡೆದು ತೇಲಿ ಬರುತ್ತದೆ
ಭಯದಲ್ಲೂ ಏನೋ ತುಮುಲ; ಮತ್ತೇನೋ ಕುತೂಹಲ
ಮೆಲ್ಲನೆ ಮುಸುಕು ಸರಿಸಿ ಇಣುಕುತ್ತೇನೆ, ಬೀಸಿ
ಬರುವ ಶಬ್ದಗಳತ್ತ, ಉಹು ಅವಳದಲ್ಲ ಆ ಸದ್ದು
ಅಯ್ಯೋ ಭಯಂಕರ ಮತ್ತೆ ಬಂತಲ್ಲ ಆ ಹದ್ದು

– 5 –

ಹೊದ್ದಿದ್ದ ಕೆಂಪು ವಧವಸ್ತ್ರವ ಕಿತ್ತೆಸೆದು
ಮಲಗಿದ್ದ ಬಂಡೆಯಿಂದಿಳಿದು ಧಡಕ್ಕನೆ ಓಡಬೇಕೆನ್ನಿಸಿ
ಅರಿವೆಗೆ ಕೈಹಾಕಿ ಎಳೆಯುತ್ತೇನೆ, ಆಶ್ಚರ್ಯ ಆಶ್ಚರ್ಯ!!
ದೇಹಕ್ಕಂಟಿದ್ದ ವಸ್ತ್ರ ಚರ್ಮವನ್ನು ಹಸಿ ಹಸಿ
ಸುಲಿದು ಮೈ ನರವೆಲ್ಲಾ ನೆತ್ತರಾಗಿಸುತ್ತದೆ
ನೆತ್ತರ ಬಣ್ಣವಾಗಿ ಹರಿದು ಮರಳಲ್ಲಿ ಹೊರಳುತ್ತದೆ.
ಸೋಜಿಗ, ನನ್ನೆದೆಯ ಕುಕ್ಕಿ ತಿನ್ನಲು ಬಂದ
ಆ ಹದ್ದಿನ ರೆಕ್ಕೆಗಳು ಕೆಂಪಿನೊಳು ಕೆಂಪಾಗಿ
ಅದರ ಕಲ್ಲಿನೆದೆಯಲ್ಲಿ ಉಸಿರು ತತ್ತರಿಸಿ ಹದ್ದೂ ಕೂಗುತ್ತದೆ
ಕೊಕ್ಕಿನೊಳಗಿಂದ ಉಕ್ಕಿಬಂದ ಕ್ಲಿರ್ರರ್ ಕ್ರಾ ಕ್ರಾ ಶಬ್ದ
ಮುಗಿಲ ಆವರಿಸುತ್ತದೆ. ದಿಕ್ತಟ ತುಂಬಿದ
ಕೆಂಪಿನೋಕುಳಿಯಲ್ಲಿ ಆ ಕೀರಲು ಸದ್ದಿನೊಳಗೆ
ಆ ಹದ್ದಿನ ಒಡಲೊಳಗೆ ಆ ಜಿದ್ದಿನ ಕಣ್ಣೊಳಗೆ
ಕುದಿಯುತ್ತದೆ ಕಡಲು; ಮೊರೆಯುತ್ತದೆ ಮುಗಿಲು;
ಬೆಂಕಿಯಾಕಾಶ ಬೆದೆ ಬಂದು ತೆರೆಯುತ್ತದೆ ಕಣ್ಣು

– 6 –

ತ್ಯಾಗಕ್ಕಾಗಿ ಜೀವತೆರಲು ಬಂದ ಜೀಮೂತ
ಕುಕ್ಕಿ ತಿನ್ನುವುದೇ ಉದ್ಯೋಗವಾದ ಹದ್ದು
ಇಬ್ಬರಲಿ ಯಾರು ಹೆಚ್ಚು? ನಿಲ್ಲುತ್ತದೆ ಪ್ರಶ್ನೆ ಬೆಚ್ಚಿ;
ಕೊನೆಗೆ ಕೊಕ್ಕುಗಳು ಮುಸೆಯುತ್ತವೆ ತಮ್ಮನ್ನು ತಾವೇ ಗೆದ್ದು.

— ಎಲ್. ಎನ್. ಮುಕುಂದರಾಜ್

# ಪ್ರತಿಕ್ರಿಯೆ

— ಜಿ. ರಾಜಶೇಖರ

(ಶೂದ್ರದ ಅಕ್ಟೋಬರ್ 90ರ ಸಂಚಿಕೆಯಲ್ಲಿ ಪಟ್ಟಾಭಿರಾಮ ಸೋಮಯಾಜಿಯವರ ಲೇಖನಕ್ಕೆ)

ಸೋಮಯಾಜಿಯವರ ಲೇಖನ ಓದಿ ನನಗೆ ದಿಗ್ಭ್ರಮೆಯಾಗಿದೆ. ತಮ್ಮ ಲೇಖನದಲ್ಲಿ ಅವರು ನನ್ನ ತಲೆಗೆ ಕಟ್ಟಿರುವ ನಿಲುವು ಮತ್ತು ಅಭಿಪ್ರಾಯಗಳು ಎಷ್ಟು ಮಾತ್ರಕ್ಕೂ ನನ್ನವಲ್ಲ. ಅವರ ವಾದಕ್ಕೆ ಅವರ ಶರ್ತಗಳಲ್ಲಿಯೇ ಉತ್ತರಿಸುವುದಾದರೆ ಒಂದೋ ನಾನು ಅಮೇರಿಕನ್ ವಸಾಹತುಶಾಹಿಯನ್ನು ಸಮರ್ಥಿಸಬೇಕು: ಇಲ್ಲ ಅವರ ಆರೋಪಿಸುವಂತೆ ಅದರ ತತ್ವಗಳಿಗೆ ನಾನು ಆಪ್ತನಲ್ಲ ಎಂದು ಸಾಬೀತು ಮಾಡಬೇಕು. ಹಾಗೆಯೇ ಅವರು ವಸಾಹತುಶಾಹಿ = ಕೈಗಾರಿಕೀಕರಣ = ಪಾಶ್ಚಾತ್ಯೀಕರಣ = ಪ್ರಗತಿ ಎಂಬ ಸೂತ್ರವೊಂದನ್ನು ಮಂಡಿಸಿ ನಾನು ಅದನ್ನು ಪ್ರತಿಪಾದಿಸಿದ್ದೇನೆ ಎಂದು ಕೂಡಾ ಬರೆದಿದ್ದಾರೆ. ಹಾಗೆ ನಾನು ಮಾಡಿಲ್ಲ; ಅದು ನನ್ನ ಗ್ರಹಿಕೆ ಕೂಡಾ ಅಲ್ಲ. ಈ ವಾದ ಪ್ರತಿವಾದ ಹೇಗೆ ಆಡಿದರೂ ನಾನು ಸೋಲುವ ಆಟ. ಹೀಗಾಗಿ ಅವರ ವಾದವನ್ನು ಅವರ ತರ್ಕದ ಸಮೇತ ಇಡಿಯಾಗಿ ತಿರಸ್ಕರಿಸುವುದು ನನಗೆ ಇರುವ ಒಂದೇ ಒಂದು ಮಾರ್ಗ.

ಸೋಮಯಾಜಿ ಹೇಳುವ ಅಮೇರಿಕನ್ ವಸಾಹತುಶಾಹಿ ಯಾವುದೋ ನನಗೆ ಗೊತ್ತಿಲ್ಲ. ನನಗೆ ಗೊತ್ತಿರುವ ಅಮೇರಿಕನ್ ವಸಾಹತುಶಾಹಿ ಎಂದರೆ ಅಮೇರಿಕೆ ಎಂಬ ಶ್ರೀಮಂತ ದೇಶ ಜಗತ್ತಿನ ಬಡದೇಶಗಳ ಮೇಲೆ ನಡೆಸುತ್ತಿರುವ ದಬ್ಬಾಳಿಕೆಯ ರಾಜಕೀಯ. ಅಮೇರಿಕ ಮತ್ತು ಪಶ್ಚಿಮದ ಬಂಡವಾಳಶಾಹಿ ದೇಶಗಳ ಈ ದಬ್ಬಾಳಿಕೆಯ ವಿರುದ್ಧ ನಡೆದ ತೃತೀಯ ಜಗತ್ತಿನ ಹೋರಾಟದ ನಾಯಕತ್ವ ವಹಿಸಿದ ಯಾರೂ ವಿಜ್ಞಾನ, ಕೈಗಾರಿಕೀಕರಣ ಮತ್ತು 'ಪ್ರಗತಿ'ಗಳನ್ನು ಅಮೇರಿಕದ ಬಳುವಳಿ ಎಂದು ಭಾವಿಸಿದ್ದಾಗಲೀ ತಿರಸ್ಕರಿಸಿದ್ದಾಗಲೀ ಇಲ್ಲ. ಉದಾ: ಇರಾನ್‌ನ ಮೊಸಾಡೆಗ್, ವಿಯೆಟ್‌ನಾಮ್‌ನ ಹೋಚಿಮಿನ್ಸ್, ಚೀನಾದ ಮಾವೋತ್ಸೆತುಂಗ್, ಕ್ಯೂಬಾದ ಫಿಡೆಲ್ ಕ್ಯಾಸ್ಟ್ರೋ ಮತ್ತು ಚೆಗ್ಗವಾರಾ, ನಿಕರಗುವಾದ ಡೇನಿಯಲ್ ಒರ್ಟೆಗಾ, ಚಿಲಿಯ ಅಲೆಂಡ್, ಗ್ವಾಟೆಮಾಲಾದ ಅರಾಜೆಂಜ್, ರಿಝಂಬಾಬ್ವೆಯ ರಾಬರ್ಟ್ ಮುಗಾಬೆ, ಅಂಗೋಲಾದ ಅಗಸ್ಟಿನೋ ನೇಟೋ, ದ. ಆಫ್ರಿಕಾದ ನೆಲ್ಸನ್ ಮಂಡೇಲಾ, ನೈಜೀರಿಯಾದ ಜ್ಯೂಲಿಯಸ್ ನೈರೇರೆ, ಕೀನ್ಯಾದ ಜೋಮೋ ಕೆನ್ಯಾಟಾ, ಕಾಂಗೋದ ಪ್ಯಾಟ್ರಿಕ್ ಲುಮುಂಬಾ, ಮೊಝಾಂಬಿಕ್‌ನ ಸಮೋರಾ ಮಾಶೇಲ್, ಗಿನಿಯ ಕಾಬ್ರಾಲ್, ಘಾನಾದ ಕ್ವಾಮೆ ಎನ್‌ಕ್ರೂಮಾ, ಅಲ್ಜೀರಿಯಾದ ಬಿನ್‌ಬೆಲ್ಲಾ, ಈಜಿಪ್ಟ್‌ನ

---

ಜಿ. ರಾಜಶೇಖರ, ಉಡುಪಿ

ನಾಸೇರ್, ಪ್ಯಾಲಿಸ್ತೀನ್‌ನ ಯಾಸೇರ್ ಅರಾಫತ್, ಇಂಡೋನೀಸಿಯಾದ ಸುಕರ್ಣ, ಸಿಲೋನ್‌ನ ಬಂಡಾರ ನಾಯಕೆ ಮತ್ತು ಭಾರತದ ನೆಹರೂ. ವಸಾಹತುಶಾಹಿ ಮತ್ತು ನವವಸಾಹತುಶಾಹಿಯ ನಿರ್ದಿಷ್ಟ ಗುಣಲಕ್ಷಣಗಳನ್ನು ಪಡೆದ ಚಾರಿತ್ರಿಕ ವಿದ್ಯಮಾನವಾಗಿದೆ. ಅದರ ವಿರುದ್ಧ ನಡೆದ ಹೋರಾಟ ಕೂಡಾ ಸ್ಪಷ್ಟವಾದ ತತ್ವ ಮತ್ತು ಉದ್ದೇಶಗಳು ಇರುವ ಒಂದು ಚಾರಿತ್ರಿಕ ಬೆಳವಣಿಗೆ. ಆದರೆ ಸೋಮಯಾಜಿ ತನ್ನ ಲೇಖನದಲ್ಲಿ 'ನವವಸಾಹತುಶಾಹಿ' ಎಂಬ ಶಬ್ದವನ್ನು ಬಳಸಿರುವ ರೀತಿ ನೋಡಿದರೆ ಅವರು ಅದನ್ನು ಒಂದು ಕವಿಸಮಯ ಎಂದು ಭಾವಿಸಿರುವಂತಿದೆ. ಸೋಮಯಾಜಿಯವರ ಅಪ್ಪಟ ಸ್ವಂತದ್ದಾದ ಈ 'ಅಮೇರಿಕನ್ ವಸಾಹತುಶಾಹಿ'ಯ ಕಲ್ಪನೆಯ ಹಾಗೆಯೇ ಈ ಜಗತ್ತಿನ ವಾಸ್ತವಗಳ ಜೊತೆ ಚೂರೂ ಸಂಬಂಧವಿಲ್ಲದ ಅವರ ಇನ್ನೊಂದು ಕಲ್ಪನೆ "ಗಾಂಧೀವಾದ"ದ್ದು. ಅವರದ್ದೇ ಸೃಷ್ಟಿಯಾದ ಈ ಗಾಂಧೀವಾದ ಎಂಬ ದೊಡ್ಡ ಚೀಲವಲ್ಲಿ ತನಗೆ ಚೆಂದ ಕಂಡದ್ದನ್ನೆಲ್ಲ ತುಂಬಿ ಅದನ್ನು ನಾನು ಹೊರುತ್ತಿಲ್ಲ ಎಂದು ಅವರ ದೂರು! ಭಾರತ ಒಂದೇ ಈ ಜಗತ್ತಿನ ಮಾಜಿ ವಸಾಹತು ಮತ್ತು ಗಾಂಧೀವಾದ ಒಂದೇ ವಸಾಹತುಶಾಹಿ ವಿರೋಧಿ ವಿಚಾರಧಾರೆ ಎನ್ನುವುದು ಸೋಮಯಾಜಿಯವರ ದೃಢವಾದ ನಿಲುವು. ಇವರ ಜೊತೆ ಸಂವಾದವಾದರೂ ಹೇಗೆ ಸಾಧ್ಯ?

ಅಡಿಗರ ಕಾವ್ಯದ ನನ್ನ ಓದಿನ ಬಗ್ಗೆಯೂ ಸೋಮಯಾಜಿ ನಿರಾಧಾರವಾದ ಆರೋಪಗಳನ್ನು ಮಾಡಿದ್ದಾರೆ. ತಮ್ಮ ಲೇಖನದ ಮೊದಲ ಪ್ಯಾರಾದಲ್ಲಿಯೇ 'ಏಕಾಂತದ ಆಪ್ತ ವಾಕ್ಯ. ಆತ್ಮನಿವೇದನೆಯ ಸ್ವಗತ, ಅನುಮಾನ, ಉಭಯ ಸಂಕಟದ ಬಿಕ್ಕಟ್ಟುಗಳು ಅಡಿಗರ ಕಾವ್ಯದ ಮೂಲದ್ರವ್ಯ' ಎಂಬುದು ನನ್ನ ನಿಲುವು ಎಂದು ಅವರು ಬರೆಯುತ್ತಾರೆ. ಹಾಗೆಂದು ನಾನು ಎಲ್ಲಿ ಹೇಳಿದ್ದೇನೆ? ಸ್ವಗತ, ಅನುಮಾನ, ಉಭಯ ಸಂಕಟಗಳು ಅಡಿಗರ ಕಾವ್ಯಶೈಲಿಗೆ ಸಂಬಂಧಿಸಿದ ವಿಶೇಷಣಗಳೇ ಹೊರತು, ವಸ್ತುವನ್ನು ಕುರಿತದ್ದಲ್ಲ ಎನ್ನುವುದು ನನ್ನ ಮುನ್ನುಡಿಯಲ್ಲಿ ಸ್ಪಷ್ಟವಾಗಿದೆ. ಬರವಣಿಗೆಯಲ್ಲಿ ತನ್ನನ್ನು ತಾನೇ ಪ್ರಶ್ನಿಸಿಕೊಳ್ಳಬಲ್ಲ ಲೇಖಕ, ಎಗ್ಗಿಲ್ಲದ ಹಠವಾದಿಗಿಂತ ಹೆಚ್ಚು ಉದಾರಿ. ಆದರೆ ಅಡಿಗರ ಅತ್ಯುತ್ತಮ ಕಾವ್ಯ ಕೂಡಾ ಸಂಸ್ಕೃತ, ವೈದಿಕ, ಬ್ರಾಹ್ಮಣ ಪರಂಪರೆಯ ನೆನಪು ಮತ್ತು ನುಡಿಗಟ್ಟುಗಳಿಂದ ರೂಪಿತವಾದ ಕಾವ್ಯ. ಅದನ್ನು ಹಿಂದೂ ಎಂದು ಕರೆಯುವುದೂ ಸಾಧ್ಯವಿಲ್ಲ. ಯಾಕೆಂದರೆ ಹಿಂದೂ ಪರಂಪರೆಯಲ್ಲಿ ವಚನಕಾರರು, ಭಕ್ತಿಪಂಥದ ಸಂತರು ಮತ್ತು ರಾಮಕೃಷ್ಣ ಪರಮಹಂಸ, ರಮಣ ಮಹರ್ಷಿಗಳಂತಹ ಅನುಭಾವಿಗಳೂ ಇದ್ದಾರೆ. ಅಡಿಗರ ಕಾವ್ಯದಲ್ಲಿ, ಪರಂಪರೆಯ ಒಳಗೇ ಇರುವ ಈ ಭಿನ್ನ ಮತದ ಧ್ವನಿಗಳ ಪ್ರಭಾವ ಕಾಣುವುದಿಲ್ಲ. ಇದನ್ನು ಅವರ

ಕಾವ್ಯದ ಒಂದು ಗುಣವೆಂದೇ ನಾನು ತಿಳಿಯುತ್ತೇನೆ. ಅಡಿಗರ ಪ್ರಾಮಾಣಿಕ ಮನೋಧರ್ಮಕ್ಕೆ ಗತಕಾಲದ ಯಾವ ನೆನಪನ್ನೂ ಸಲೀಸಾಗಿ ಅವಾಹಿಸಿಕೊಳ್ಳುವುದು ಕಷ್ಟಸಾಧ್ಯ. ಅವರಿಗೆ 'ಇಷ್ಟದೇವತಾ ವಿಗ್ರಹ'. 'ಗುಡಿಗೋಪುರಗಳ ಬಂಗಾರ ಶಿಖರ', 'ಪುರುಷೋತ್ತಮನಾದ ರಾಮ–ಕಣ್ಣಿದುರು ಇರುವ ವಾಸ್ತವವಲ್ಲ; ಕಷ್ಟಪಟ್ಟು ಸಾಕಾರಗೊಳಿಸಬೇಕಾದ ಆದರ್ಶ. ಇಂತಹ ನಿಷ್ಠುರದ ಕವಿ, ಬಸವ, ಪುರಂದರ, ಕನಕ, ಕಬೀರರ ಗೆಜ್ಜೆಗಳನ್ನು ಕಟ್ಟಿಕೊಂಡು ಕುಣಿಯಲು ನಿರಾಕರಿಸುವುದೂ ಸಹಜವಾಗಿದೆ. 'ಅಡಿಗರ ಯೋಚನೆಗಳಲ್ಲಿ ಮೂಲಭೂತ ವ್ಯತ್ಯಾಸ ಆಗಿಲ್ಲ' ಎನ್ನುವ ನನ್ನ ಮಾತಿಗೆ ಹಿನ್ನೆಲೆ ಅವರ ಉತ್ತಮ ಕಾವ್ಯದಲ್ಲೂ ಎದ್ದುಕಾಣುವ ಬ್ರಾಹ್ಮಣ್ಯ. ನನ್ನ ಮುನ್ನುಡಿಯಲ್ಲೂ ಅದು ಸಾಕಷ್ಟು ಸ್ಪಷ್ಟವಾಗಿಯೇ ಇದೆ.

ಅಪಾರ್ಥ ಮತ್ತು ಮಿಥ್ಯಾರೋಪಗಳ ತನ್ನ ವಾದವನ್ನು ಮುಂದುವರಿಸಿ ಸೋಮಯಾಜಿ, "ನಾನು ಹೆಚ್ಚು ಕ್ಲಿಷ್ಟವಾದ ಕಾವ್ಯವನ್ನು ಬಯಸುತ್ತಿದ್ದೇನೆಯೇ ವಿನಾ ಕಾವ್ಯಕ್ಕೆ ತನ್ನ ಸ್ವರೂಪದಿಂದಲೇ ಒಂದು ಯೋಚನಾ ಕ್ರಮವನ್ನು ನೈತಿಕವೆನ್ನಿಸುವ ಶಕ್ತಿ ಇದೆ ಎಂದು ಹೇಳುತ್ತಿಲ್ಲ" ಎಂದು ಬರೆದಿದ್ದಾರೆ. ಇದಾದರೆ ಸತ್ಯವಾದ ಮಾತು! ಅಡಿಗರ ಕಾವ್ಯಕ್ಕೆ ಮಾತ್ರವಲ್ಲ, ಯಾರ ಕಾವ್ಯಕ್ಕೂ ಆ ಶಕ್ತಿ ಇದೆ ಎಂದು ನಾನು ಖಂಡಿತ ಭಾವಿಸುವುದಿಲ್ಲ. ಕಾವ್ಯಕ್ಕೇ ಯಾಕೆ, ಯಾವ ಕಲಾಪ್ರಕಾರಕ್ಕೂ ಇಂತಹ ಸ್ವಾಯತ್ತತೆಯಾಗಲೀ, ನಿರ್ಣಾಯಕ ಶಕ್ತಿಯಾಗಲೀ ಇಲ್ಲ. ಎಂತಹ ಕಾವ್ಯಕ್ಕಾದರೂ ಫ್ಯಾಸಿಸಂ, ಮತೀಯವಾದ, ಅಸಮಾನತೆ, ಜಾತಿಪದ್ಧತಿಗಳ ಯೋಚನಾ ಕ್ರಮವನ್ನು ನೈತಿಕವೆನ್ನಿಸುವ ಶಕ್ತಿ ಇದೆಯೆ ? ಸಾಹಿತ್ಯಕ್ಕೆ ಇಂತಹ ಶಕ್ತಿ ಇಲ್ಲವಾದ್ದರಿಂದಲೆ ಒಂದು ಕೃತಿಯನ್ನು ಒಳ್ಳೆಯ ಕೃತಿ ಎಂದು ಒಪ್ಪಿಕೊಂಡೂ ಅದರ ತಾತ್ವಿಕತೆಯ ಬಗ್ಗೆ ಪ್ರಶ್ನೆಗಳನ್ನೆತ್ತಬಹುದಾಗಿದೆ. ವಿಮರ್ಶೆಯಲ್ಲಿ ಇಂತಹ ಪ್ರಶ್ನೆಗಳನ್ನು ಕೇಳುವುದು ವಿರೋಧಾಭಾಸವಲ್ಲ; ಬದಲಿಗೆ ಅದೇ ವಿಮರ್ಶೆಯ ಆದ್ಯತೆಯ ಜವಾಬ್ದಾರಿ.

"ಹೆಚ್ಚು ಕ್ಲಿಷ್ಟವಾದ ಕಾವ್ಯವನ್ನು ನಾನು ಬಯಸುತ್ತೇನೆ" ಎನ್ನುವ ಅವರ ಆಪಾದನೆ ನಿಜವಲ್ಲ. ನಾನು ಓದುವ ಕಾವ್ಯ ಹೀಗೆಯೇ ಇರಬೇಕು ಎನ್ನುವ ಯಾವ ಪೂರ್ವನಿಶ್ಚಿತ ಬಯಕೆಯೂ ನನಗೆ ಇಲ್ಲ. ಆದರೆ ಚರಿತ್ರೆ, ಸಮಾಜ ಮತ್ತು ರಾಜಕೀಯಗಳ ಕುರಿತು ನಿರ್ದಿಷ್ಟ ನಿಲುವು ತಳೆಯುವ ಕವಿತೆಗಳು ಮತ್ತು ಅಂತಹ ಉದ್ದೇಶವೇನೂ ಇಲ್ಲದ ಕವಿತೆಗಳು ಎಂಬ ವ್ಯತ್ಯಾಸವನ್ನು ಮಾತ್ರ ಖಂಡಿತ ನಾನು ಮಾಡುತ್ತೇನೆ. ನನ್ನ ಈ ತಾರತಮ್ಯ ಸೋಮಯಾಜಿಗೆ ಜುಜುಬಿ ಲೆಕ್ಕಾಚಾರದಂತೆ ಕಾಣಿಸಬಹುದಾದರೂ, ಕಾವ್ಯ ಓದುವ ಎಲ್ಲರೂ ಅದನ್ನು ಅನಿವಾರ್ಯವಾಗಿ ಮಾಡಲೇಬೇಕು. ಉದಾಹರಣೆಗೆ ಅಡಿಗರ ಪ್ರಸ್ತುತ ಕವನ ಸಂಕಲನದಲ್ಲಿಯೇ, ಅವರ ನಾಯಿಮರಿಗಳ

ಬಗ್ಗೆ ಎರಡು ಕವಿತೆಗಳಿವೆ. ಸರಳವಾದ ಮತ್ತು ಮನಕಲುಕುವಂತಹ ರಚನೆಗಳು ಅವು. ಆದರೆ ಅಡಿಗರ ತಾತ್ವಿಕತೆಯ ಬಗ್ಗೆ ಯೋಚಿಸುವಾಗ ಆ ಕವಿತೆಗಳನ್ನು ಮುಖ್ಯವಾಗಿ ಪರಿಗಣಿಸಬಹುದೆ? ಹೋಗಲಿ, ಕವಿ ತನ್ನ ಇಳಿವಯಸ್ಸಿನಲ್ಲಿ ನಿತ್ಯ ಜೀವನದ ಸಾಮಾನ್ಯ ಸಂಗತಿಗಳಲ್ಲಿಯೇ ಸತ್ಯದ ಹೊಸ ಮಗ್ಗಲುಗಳನ್ನು ಶೋಧಿಸುತ್ತಿದ್ದಾರೆ ಎಂದಾದರೂ ಹೇಳಬಹುದೆ? ಹಾಗೆ ಹೇಳುವುದಕ್ಕೆ ನನಗಂತೂ ಈ ಎರಡು ಕವಿತೆಗಳು ತಕ್ಕ ಆಧಾರವಲ್ಲ. ಅಡಿಗರ ತಾತ್ವಿಕತೆಯ ಬಗ್ಗೆ ನಾವು ಏನು ಹೇಳುವುದಿದ್ದರೂ ಅವರ ಭೂತ, ಭೂಮಿಗೀತ, ರಾಮನವಮಿಯ ದಿವಸ, ಕೂಪಮಂಡೂಕದಂತಹ ಕವಿತೆಗಳನ್ನೇ ಉದಾಹರಿಸಬೇಕು. ಆ ಕವಿತೆಗಳನ್ನು ನೆನಪಿಸಿಕೊಳ್ಳದೆ ಅವರ ಇತ್ತೀಚಿಗಿನ ರಚನೆಗಳನ್ನು ಓದುವುದು ಕೂಡಾ ಸಾಧ್ಯವಿಲ್ಲ.

ಸೋಮಯಾಜಿಗೆ, ಒಂದು ಕವಿತೆ ಏನು ಹೇಳುತ್ತದೆ? ಅದರ ಅರ್ಥವೇನು ಎಂದು ಕೇಳುವುದೇ ಅಪರಾಧವಾಗಿ ಕಾಣುತ್ತದೆ. ಹಾಗೆ ಕೇಳಿಬಿಟ್ಟರೆ ಕವಿತೆಯ ರೂಪ, ಆಕೃತಿಗಳನ್ನು ಗುರುತಿಸಲು ಗೊತ್ತಿಲ್ಲದ ದಡ್ಡತನ ಎಂದು ಯಾರಾದರೂ ಭಾವಿಸುತ್ತಾರೋ ಎಂದು ಅವರಿಗೆ ಭಯವಿರಬೇಕು. ನನಗೆ ಅಂತಹ ಭಯವಿಲ್ಲ.' ಕವಿತೆಯೊಂದರ ರೂಪ, ಲಯ, ಪ್ರತಿಮಾ ವಿಧಾನ, ಭಾಷೆಯ ಬಳಕೆ ಇತ್ಯಾದಿಗಳನ್ನು ನಾನು ಗುರುತಿಸಬಲ್ಲೆ; ಅಷ್ಟೇ ಅಲ್ಲ ಬೇಕಾದರೆ ಕವಿತೆಯ ಸಾಲುಗಳ ಮಾತ್ರಾಗಣವನ್ನೂ ಲೆಕ್ಕ ಹಾಕಿ ಹೇಳಬಲ್ಲೆ' ಎಂದು ಯಾರ ಮುಂದೆಯೂ ತೋರಿಸಿಕೊಡಬೇಕಾದ ಅಗತ್ಯ ನನಗೆ ಕಂಡಿಲ್ಲ. ಹಾಗಾಗಿ ಒಂದು ಕವಿತೆ ಚರಿತ್ರೆಯ ಬಗ್ಗೆ ಮತ್ತು ಸಮಾಜದ ಬಗ್ಗೆ ಎಂತಹ ನಿಲುವನ್ನು ತಳೆಯುತ್ತದೆ? ಅದನ್ನು ನಾವು ಒಪ್ಪಬಹುದೆ? ಎಂದು ಕೇಳಲು ನನಗೆ ಯಾವ ಸಂಕೋಚವೂ ಇಲ್ಲ. ಸೋಮಯಾಜಿಯವರ ವಿಮರ್ಶಾ ವಿಧಾನವನ್ನು ಒಪ್ಪಿಕೊಂಡರೆ ಯಾವ ಕವಿತೆಯ ಬಗ್ಗೆಯೂ ನಾವು ಹೀಗೆ ಪ್ರಶ್ನಿಸುವಂತಿಲ್ಲ. ಯಾಕೆಂದರೆ ಪ್ರತಿಯೊಂದು ಕವಿತೆಯೂ ಒಂದು ಸ್ವಯಂಪೂರ್ಣ ವ್ಯವಸ್ಥೆ; ಅದರ ಸ್ವರೂಪಕ್ಕೇನೆ ಒಂದು ಯೋಚನಾ ಕ್ರಮವನ್ನು ನೈತಿಕವೆನ್ನಿಸುವ ಶಕ್ತಿ ಇದೆ; ಕವಿತೆಯ ಪಾಠವೇ ಅಂತಿಮವಾದದ್ದು. ಕವಿತೆಯನ್ನು ಓದುವುದು ಎಂದರೆ ಓದುಗ ತನ್ನ ಮನಸ್ಸು ಎಂಬ ಖಾಲಿ ಪಾತ್ರೆಯಲ್ಲಿ ಅದನ್ನು ತುಂಬಿಸಿಕೊಳ್ಳುವುದು. ಸಂವಾದ, ಪ್ರಶ್ನೆ, ಸಂದೇಹ ಯಾವುದಕ್ಕೂ ಅಲ್ಲಿ ಎಡೆಯಿಲ್ಲ. ಕವಿತೆಯಲ್ಲಿ ಅರ್ಥ ಅರಸುವುದು ಎಂದರೆ ಕಸದಲ್ಲಿ ಕಾಳು ಹೆಕ್ಕಿದ ಹಾಗೆ: ಕೇವಲ ಉಂಛ ವೃತ್ತಿ! ಕವಿತೆಯನ್ನು ಆಸ್ವಾದಿಸುವ ಬುದ್ಧಿ ಹೃದಯಗಳ ಘನವಾದ ಕೆಲಸಕ್ಕೆ ಅದೇ ಎಷ್ಟು ಮಾತ್ರಕ್ಕೂ ತಕ್ಕುದಲ್ಲ! ಸೋಮಯಾಜಿಯವರ ವಾದವನ್ನು ಮಾತ್ರವಲ್ಲ ಅವರು ಕವಿತೆ ಓದುವ ರೀತಿಯನ್ನೇ ನಾನು ತಿರಸ್ಕರಿಸುತ್ತೇನೆ.

ಅಡಿಗರ ಕಾವ್ಯದ ನನ್ನ ವಿಮರ್ಶೆಯಲ್ಲಿ ನಾನು 'ಕಾವ್ಯ ಮತ್ತು ಯೋಚನೆ

ಯನ್ನು ಬೇರ್ಪಡಿಸಿ, ಯೋಚನೆಯನ್ನು ಮೇಲೂ ಕಾವ್ಯವನ್ನು ಕೆಳಗೂ ಆತ್ಯಂತಿಕವಾಗಿ ಸ್ಥಾಪಿಸಿಬಿಟ್ಟಿದ್ದೇನೆ' ಎನ್ನುವುದು ಅವರ ಇನ್ನೊಂದು ಆಪಾದನೆ. ಅಡಿಗರ ಉತ್ತಮ ಕಾವ್ಯದ ಕಾಳಜಿಗಳು ಸಂದೇಹದಲ್ಲಿ, ಆತ್ಮಶೋಧನೆಯಲ್ಲಿ ಮತ್ತು ಸ್ವಂತದ ಬಗೆಗಿನ ಸಂಕೋಚದಲ್ಲಿ ವ್ಯಕ್ತವಾದರೆ ಅವರ ಇತ್ತೀಚಿನ ಕವಿತೆಗಳು ಏಕಪಕ್ಷೀಯವಾಗಿವೆ; ಖಡಾಖಂಡಿತವಾದ ಪ್ರತಿಪಾದನೆಗಳಾಗಿವೆ; ಆದ್ದರಿಂದ ಅವು ಹೆಚ್ಚು ಪ್ರತಿಗಾಮಿ ಎನ್ನುವುದು ಮಾತ್ರ ನನ್ನ ಮಾತು. ಯೋಚನೆಯನ್ನು ಮೇಲೂ ಕಾವ್ಯವನ್ನು ಕೆಳಗೂ ಇಡುವ ತಕ್ಕಡಿ ಸೋಮಯಾಜಿಯವರೇ ಸೃಷ್ಟಿಸಿರುವಂತಹದ್ದು. ನನ್ನ ನಿಲುವನ್ನು ಇನ್ನಷ್ಟು ಸ್ಪಷ್ಟಪಡಿಸುತ್ತೇನೆ. ಈಗ ಕೆಲವು ವರ್ಷಗಳ ಹಿಂದೆ ಅಡಿಗರು ಜನಸಂಘದ ಅಭ್ಯರ್ಥಿಯಾಗಿ ಚುನಾವಣೆಯಲ್ಲಿ ಸ್ಪರ್ಧಿಸಿದಾಗ ಅಡಿಗರ ಕಾವ್ಯ ಮತ್ತು ಅವರ ರಾಜಕೀಯದ ನಡುವಿನ ವ್ಯತ್ಯಾಸ ಹೊಡೆದು ಕಾಣುತ್ತಿತ್ತು. ಇವತ್ತು ಅಡಿಗರು ಮತ್ತೆ ಅದೇ ಹಿಂದೂ ಮತೀಯವಾದದ ಬಾವುಟದ ಅಡಿಯಲ್ಲಿ ನಿಂತರೆ ಅವರ ಇತ್ತೀಚೆಗಿನ ಕಾವ್ಯ ಮತ್ತು ಅವರ ಈ ರಾಜಕೀಯದ ನಡುವೆ ಅಂತಹ ವ್ಯತ್ಯಾಸ ಕಾಣುತ್ತದೆಯೆ? ಸೋಮಯಾಜಿ ಈ ಬಗ್ಗೆ ಏನು ಹೇಳುತ್ತಾರೆ?

ಅಡಿಗರ ಜೊತೆ ಕಾರಂತರನ್ನು ಹೋಲಿಸುತ್ತ ನಾನು ಬರೆದದ್ದರ ಬಗ್ಗೆ ಸೋಮಯಾಜಿ 'ಪ್ರಗತಿ'ಯ ಕುರಿತು ಒಂದು ಪುಟ್ಟ ಪುರಾಣವನ್ನೇ ಬರೆದು ನನ್ನನ್ನು ಪ್ರಗತಿಯ ಕೂಗು ಹಾಕುವ ಬೀದಿ ದಾಸಯ್ಯನ ಸಾಲಿನಲ್ಲಿ ನಿಲ್ಲಿಸಿದ್ದಾರೆ. ಅವರ ಮಾತಿನ ಹಿಂದೆ ಇರುವ ತಿರಸ್ಕಾರಕ್ಕೆ ನನ್ನ ಪ್ರತಿಮಾತು ಇಲ್ಲ, ಆದರೆ ತಮ್ಮ ಲೇಖನದಲ್ಲಿ ತಮ್ಮ ವ ಊಗಿನ ಸೇರಕ್ಕೆ ಬಳಸಿರುವ ಈ 'ಪ್ರಗತಿ'ಯ ಪರಿಕಲ್ಪನೆಯ ಕುರಿತು ನನಗೂ ಕೆಲವು ಮಾತುಗಳನ್ನು ಹೇಳುವುದಿದೆ. ಮೊದಲೇ ಹೇಳಿದಂತೆ, ಸೋಮಯಾಜಿಯವರ ಮಟ್ಟಿಗೆ 'ಪ್ರಗತಿ' ಎನ್ನುವ ಶಬ್ದಕ್ಕೆ ಇರುವುದು ಒಂದೇ ಅರ್ಥ; ಕೈಗಾರಿಕೀಕರಣ ಮತ್ತು ಅದರಿಂದ ಆಗುವ ಅನಾಹುತ. ಆದರೆ 'ಪ್ರಗತಿ'ಗೆ ಇತಿಹಾಸ, ಅರ್ಥಶಾಸ್ತ್ರ ಮತ್ತು ಸಮಾಜಶಾಸ್ತ್ರಗಳ ಶಿಸ್ತುಬದ್ಧ ಯೋಚನೆಯಲ್ಲಿ ಎಂತಹ ಅಗಾಧವಾದ ಅರ್ಥರಾಶಿ ಇದೆ ಎಂದರೆ ಅದನ್ನೆಲ್ಲ ವಿವರಿಸಲು ಒಂದು ಗ್ರಂಥವನ್ನೇ ಬರೆಯಬೇಕಾದೀತು. ಹಾಗಿರುತ್ತ ಆ ಶಬ್ದವನ್ನು ಇಷ್ಟು ಲಘುವಾಗಿ ಮತ್ತು ಏಕಪಕ್ಷೀಯವಾಗಿ ಬಳಸುವುದು ಬೇಜವಾಬ್ದಾರಿತನ. ಅದು ಏನೇ ಇರಲಿ 'ಪ್ರಗತಿ'ಯ ಕುರಿತು ಸೋಮಯಾಜಿಯವರಿಗೆ ಇರುವ ಪೂರ್ವಾಗ್ರಹಗಳು ನನಗೆ ಇಲ್ಲ. ಹಾಗೆಂದು, 'ಪ್ರಗತಿ'ಯ ಬಗ್ಗೆ ನನಗೆ ಅನುಮಾನಗಳೇ ಇಲ್ಲ ಎನ್ನುವ ನಿರ್ಧಾರಕ್ಕೆ ಬಂದು ತನಗೆ ತೋಚಿದ್ದನ್ನೆಲ್ಲ ಅವರು ಬರೆದಿದ್ದಾರೆ: ಪ್ರಗತಿಯ ಪರಿಕಲ್ಪನೆಯಲ್ಲಿ ಕೈಗಾರೀಕರಣ ಮಾತ್ರವಲ್ಲ, ಕೆಳಜಾತಿಯವರ ಸಮಾನತೆಯ ಚಳುವಳಿ, ಸಮೂಹ ಸಾಕ್ಷರತೆ ಮತ್ತು ಆರೋಗ್ಯದ ಪ್ರಯತ್ನಗಳು,

ಸ್ತ್ರೀಯರ ಸಮಾನ ಹಕ್ಕುಗಳ ಹೋರಾಟ, ಭೂಸಂಧಾರಣೆಯ ಚಳುವಳಿ, ಧರ್ಮ ನಿರಪೇಕ್ಷ ರಾಷ್ಟ್ರದ ಕಲ್ಪನೆ ಮುಂತಾದವು ಕೂಡಾ ಬರುತ್ತವೆ. ಇವೆಲ್ಲವೂ ನಮ್ಮ ಪರಂಪರಾಗತ ವ್ಯವಸ್ಥೆಯನ್ನು ಎದುರು ಹಾಕಿಕೊಂಡೇ ಮೂರ್ತವಾಗಿದೆ. ಜನತೆಯ ಈ ಆಶೋತ್ತರಗಳನ್ನು ಸಹಿತ ಸೋಮಯಾಜಿ "ಬೀದಿ ದಾಸಯ್ಯನೂ ಜಪಿಸುವ ಪ್ರಗತಿಯ ಮಂತ್ರ" ಎಂದು ತಿರಸ್ಕರಿಸುತ್ತಾರೋ?

ಸೋಮಯಾಜಿಯವರ ಲೇಖನದಲ್ಲಿ. ಅವರು ನೇರವಾಗಿ ಹೇಳದಿದ್ದರೂ ಅವರ ವಾದದಲ್ಲೇ ಅಂತರ್ಗತವಾಗಿರುವ ಇನ್ನೂ ಕೆಲವು ತಪ್ಪು ಗ್ರಹಿಕೆಗಳು ಇವೆ. ನಾವೆಲ್ಲ ಸುಲಭದಲ್ಲಿ ಸರಳತೆ, ಸಂಯಮ, ಮಿತ ಉಪಭೋಗಗಳ ಪ್ರಶಾಂತ ಬದುಕನ್ನು ರೂಢಿಸಿ ಕೊಳ್ಳಬಹುದು, ಎನ್ನುವುದು ಇಂತಹ ಒಂದು ಗ್ರಹಿಕೆ. ಭಾರತ ಅಂತರರಾಷ್ಟ್ರೀಯ ಉತ್ಪಾದನೆ ಮತ್ತು ಮಾರುಕಟ್ಟೆಯ ವ್ಯವಸ್ಥೆಯಿಂದ ದೂರ ನಿಂತು ತನ್ನ ಪರಂಪರಾಗತ ಕೈಮಗ್ಗ, ಕುಂಬಾರ ಕಸುಬು, ಗದ್ದೆ ಬೇಸಾಯ ಇತ್ಯಾದಿಗಳೊಡನೆ ನೆಮ್ಮದಿಯಿಂದ ಬಾಳಬಹುದು; ಸಾಕಷ್ಟು ದೃಢ ಮನಸ್ಸಿನಿಂದ ನಾವು ಸಂಕಲ್ಪ ಮಾಡಿದರೆ ಸಾಕು, ವಿಷಮತೆ, ಹಸಿವು, ಯಾವುದೂ ಇಲ್ಲದ ನಂದನವನದ ಬದುಕು ಮರಳಿ ಬರುತ್ತದೆ ಎನ್ನುವುದು ಅಂತಹ ಇನ್ನೊಂದು ಗ್ರಹಿಕೆ. (ಯಾವ ಶತಮಾನದಲ್ಲಿ ನಮ್ಮ ಸಮಾಜ ಹಾಗಿತ್ತು?) ಕಾರಂತರು ಮತ್ತು ಅಡಿಗರ ಕುರಿತು ಸೋಮಯಾಜಿ ಬರೆದ ಅಷ್ಟೂ ಮಾತುಗಳಿಗೆ ಅವರ ಈ ತಪ್ಪು ಗ್ರಹಿಕೆಗಳೇ ತಳಹದಿಯಾಗಿವೆ. ಇದಕ್ಕೆಲ್ಲ ಪ್ರತಿವಾದ ಹಾಕುತ್ತ ಕೂರುವುದಕ್ಕೆ ನನಗೆ ವ್ಯವಧಾನವಿಲ್ಲ; ಅದರ ಅಗತ್ಯವೂ ಇಲ್ಲ.

●

## 'ರಾಮರಾಜ್ಯ ನನಸಾಗುವಾಗ'

ರಾಮರಾಜ್ಯ ನನಸಾಗುವ ಕಾಲ
ಎಲ್ಲೆಲ್ಲೂ ರಾಮ ಜ್ಯೋತಿ
ಅಯೋಧ್ಯೆಯಲ್ಲಿ ರಾಮದೇಗುಲ
ಕಟ್ಟುವ ಹುನ್ನಾರ
ರಾಮ ರಥಗಳು ಊರೂರು ಸುತ್ತಿ
ಶಕ್ತಿ (ಮೀರಿ) ಪ್ರದರ್ಶನ ಭಕ್ತಿ ಪ್ರವಚನ
ದೇವಾಲಯಕ್ಕೆ ಇಟ್ಟಿಗೆ, ಸಿಮೆಂಟು, ಮರಳು
ರಾಮರಾಜ್ಯಕ್ಕಾಗಿ ದುಡಿವವರಿಗೆ
ಧನ ಧಾನ್ಯ, ನಗ ನಾಣ್ಯ.

---

ಬಿ. ಚಿನ್ನಸ್ವಾಮಿ, ನಂ. ಎಂ.ಎಫ್. 14/7, ಬಿ.ಟಿ.ಎಂ. (SFHS) ಲೇಔಟ್
ಬನ್ನೇರುಘಟ್ಟ ರಸ್ತೆ, ಬೆಂಗಳೂರು-76

ಅಲ್ಲಿ ರಾಮ ಇಲ್ಲಿ ರಾಮ
ಎಲ್ಲೆಲ್ಲಿಯೂ ರಾಮನಾಗಿ
ದಿಲ್ಲಿಯಲ್ಲಿಲ್ಲ ಆರಾಮ
ಇಲ್ಲಿರದಿದ್ದರೆ ರಾಮ
ಇನ್ನೆಲ್ಲಿ ಕೊಲ್ಲಿಯಿಂದಾಚೆಯ
ಎಂಬ ಸವಾಲಿಗಿಲ್ಲ ಕಾಮ.

ಮತ್ತೆ ರಾಮನ ಕಾಲ
ಟೀವಿಯೊಳಗೆ ರಾಮಾಯಣ
ಹಳ್ಳಿ ಮಕ್ಕಳ ಕೈಲಿ ಬಿಲ್ಲು ಬಾಣ
ಆಟಕ್ಕೆಂದು ಕಿತ್ತುಕೊಂಡವೆಷ್ಟೋ ಕಣ್ಣ
ತಂಬಿಗೆಯ ಗದಾಯುದ್ಧದಲ್ಲಿ
ಮುರಿದುಕೊಂಡವು ಕಾಲ.

ರಾಮ ರಾಜ್ಯದಲ್ಲಿ
ಒಳ್ಳೆಯದೂ ಆಗಬೇಕಲ್ಲ
"ನಿಂತ ಲಾರಿ ಗುಡಿಸಲು ನುಗ್ಗಿ
ರಾಮಾಯಣ ನೋಡಲು ಹೋಗಿದ್ದ ಜನಪಾರು"–ಸುದ್ದಿ
ಶ್ರೀ ರಾಮ ಭಕ್ತ ಪರಾಧೀನ
ಟೀವಿಯಲ್ಲಿ ರಾಮಾಯಣವಿರದಿದ್ದರೆ
ಲಾರಿ ಅಲ್ಲಿ ನಿಲ್ಲುತ್ತಲೇ ಇರಲಿಲ್ಲ
ಎಂದರೆ ಕುಚೋದ್ಯವಾದೀತು ಇಲ್ಲವೆ
ನಾಸ್ತಿಕರಾದೀರಿ.

ಒಪ್ಪೊತ್ತು ಉಂಡು ಉಸ್ಸೋ ಎಂದು
ಮಲಗುವ ಮುಗ್ಧ ಜನರ ಮನದೊಳಗೆ
ಪಾಳು ಬಿದ್ದಿಲ್ಲ ರಾಮ ದೇಗುಲಗಳು
ರೆಪ್ಪೆ ತೆರೆದರೆ ರಾಮ, ಮುಚ್ಚಿದರೆ ರಾಮ
ಅತ್ತು ಭಾರವಾದರೆ ಅಯ್ಯೋ ರಾಮ
ನಕ್ಕು ಹಗುರಾದರೆ ಹಾ....ರಾಮ
ಕಷ್ಟ ಕೋಟಲೆಯಲ್ಲಿ ನಿಟ್ಟುಸಿರ ರಾಮ
ವಿಜಯದುತ್ಸವಕೆಲ್ಲ ಜಯಕಾರ ರಾಮ

ಊರೂರಿನಲ್ಲೂ ರಾಮಮಂದಿರಗಳಿವೆ
ಹೋಗಿ ನೋಡಿ
ಮತ್ಸರದ ಹೊಗೆಯಾಡುವುದಿಲ್ಲ ಅಲ್ಲಿ
ಹಾರ್ಮೋನಿಯಂ(ಸ್)ಮ್ ತಬಲ
ಸಂಪೂರ್ಣ ರಾಮಾಯಣದ ಗುನುಗುನುರಾಗ
ಹಬ್ಬ ಹರಿದಿನಗಳೆಲ್ಲ ಪೂರ್ಣ ಸರಾಗ
ಕಬ್ಬು ಕಡಿವಾಗ ಬತ್ತ ಬಡಿವಾಗ
ಒಂದೇ ಯಾಗ
ರಾಮನಾಮದ್ದೇ ಸರಿಗಮರಾಗ.

ಸದ್ಯ ಬೇಕಾದದ್ದು
ತನ್ನ ತಾನರಿಯಲು ಗುರುವಾಗಬಲ್ಲ
ಅಕ್ಷರ ರಾಮ
ಹೆಬ್ಬೆಟ್ಟಿನ ಭೂತಗಳ ಹೊಡೆದೋಡಿಸಬಲ್ಲ
ಮಾತೃ ಭಾಷೆಯ 'ಸಹಿ'ಯ ಸಿರಿ ರಾಮ
ರಾಮನ ಸಂಗಡ ನಿದ್ದೆ ಮಾಡಬಯಸುವ
ಸುಡುಗಾಡ ಬಡವರಿಗೆ ಸೂರಾಗಬಲ್ಲ
ಹೆರುವ ತಾಯಂದಿರ ಮಾನ ಮುಚ್ಚುವ
ಮಂದಿ ಮಕ್ಕಳ ಸೀರೆ ಶರಾಯಿಯಾಗಬಲ್ಲ
ಅಕ್ಷಯ ರಾಮ.

ರಾಮದೀವಿಗೆ ಹೊತ್ತು
ಯಾತ್ರೆ ನಡೆಸುವ ಧರ್ಮಸಂಸ್ಥಾಪಕನೆ
ಪ್ರಿಯ ಪುತ್ರರೆ, ಪ್ರತಿನಿಧಿಗಳೆ
ಇದು ಸಾಧ್ಯವೆ,
ಕೆಂಪಾನೆ ಕೆಸರಲ್ಲಿ
ರಥದ ಗಾಲಿ ಹೂತು ಹೋಗುವ ಮುನ್ನ.

— ಬಿ. ಚಿನ್ನಸ್ವಾಮಿ

# ಕಾಗದ

ಬೇಡವೆಂದು ಬಿಟ್ಟ
ಕಾಗದದ ಕಸ, ಎಳೆಬೊಂಬು
ಹಸಿಹಸೀ ಹುಲ್ಲು
ಹೀಗೆ ನಮ್ಮ ನಿಮ್ಮಲ್ಲಿ
ಸಾಮಾನ್ಯವಾಗಿರುವ ವಸ್ತುಗಳು–

ಕಾರ್ಖಾನೆಯಲ್ಲಿ ಉರುಳುತ್ತಿರುವ
ಆಧುನಿಕ ಯಂತ್ರೋಪಕರಣಗಳ ನಡುವೆ
ನಮಗೆ ಕಾಣದ ಹಾಗೆ
ಕರಗಿ ಶುದ್ಧವಾಗಿ
ಇದರ ಹಳೆಯ ರೂಪಗಳೆಲ್ಲ ಹೋಗಿ
ಈ ಭಿನ್ನ ಬಿಡಿ ಬಿಡಿ ಘಟಕಗಳು ಸೇರಿ
ಹೇಗೆ ತಯಾರಾಗುತ್ತಿದೆ ನೋಡಿ
ಕಾಗದ;

ಹೊರಬರುತ್ತದೆ;
ವಿಧವಿಧದ ಆಕಾರಗಳಲ್ಲಿ,
ವಿವಿಧ ಪ್ರಕಾರಗಳಲ್ಲಿ
ಇಸ್ತ್ರಿ ಹಾಕಿದ ಹಾಗೆ ನೀಟಾಗಿ
ಮುಟ್ಟಿದರೆ ಪಟಪಟ ಎನ್ನುವ ಹಾಗೆ
ಮೊದಲ ನೋಟಕ್ಕೆ ಮೈ-ಮನಸ್ಸನ್ನು ಮುಟ್ಟುವ ಹಾಗೆ
ಮನಮೋಹಕ ಡಿಸೈನುಗಳಲ್ಲಿ.

ಆದರೆ ಅದೇ ಕಾಗದ
ನಮ್ಮ ನಿಮ್ಮಲ್ಲೆ ಖುಷಿಯೆಬ್ಬಿಸುತ್ತಾ
ನಮ್ಮ ಹಲವಾರು ಕಾರ್ಯಕ್ಕೆ ಸಾಧನವಾಗಿ ಬಳಕೆಯಾಗುತ್ತಾ
ಕೆಲವೇ ಸಮಯಗಳಲ್ಲಿ ಮುದ್ದೆಯಾಗಿ
ಕಸವಾಗಿ, ಬೊಂಬಿನ ಜೊತೆಗೆ
ಕಾರ್ಖಾನೆ ಸೇರುವುದುಂಟು.
ನಾವು ಮುಟ್ಟಿದ್ದೆಲ್ಲ ಹೀಗಾದರೆ
ಇದೆಂಥ ವಿಚಿತ್ರ !

— ಸಂತೋಷ ಚೊಕ್ಕಾಡಿ

ಸಂತೋಷ ಚೊಕ್ಕಾಡಿ, ಚೊಕ್ಕಾಡಿ ಅಂಚೆ, ಸುಳ್ಯ ತಾಲ್ಲೂಕು, ದ.ಕ.–574 212

# ಅಬ್ರೂಜಿಯಲ್ಲಿ ಚಳಿಗಾಲ

—ನತಾಲಿಯಾ ಗಿಂಜ್‌ಬುರ್ಗ್

God has given us this moment of peace.

[ಆಧುನಿಕ ಇತಾಲಿಯನ್ ಸಾಹಿತ್ಯದ ಪ್ರಸಿದ್ಧ ಲೇಖಕಿ ನತಾಲಿಯಾ ಗಿಂಜ್‌ಬುರ್ಗ್. ಕಾದಂಬರಿಕಾರ್ತಿಯಾಗಿ ಖ್ಯಾತಿ ಪಡೆದಿರುವ ನತಾಲಿಯಾ ಆರಂಭದಿಂದಲೂ ಸಾಮಾಜಿಕ ಜೀವನದಲ್ಲಿ ಬೆರೆಯುತ್ತಾ ಬಂದವಳು. ಇಟಲಿ ಪಾರ್ಲಿಮೆಂಟಿನ ಸದಸ್ಯಳೂ ಆಗಿದ್ದವಳು. ವೈವಾಹಿಕ ಜೀವನದ ಆರಂಭದಲ್ಲೇ ಎರಡನೇ ಮಹಾಯುದ್ಧದ ಅವಧಿಯಲ್ಲಿ ಗಡಿಪಾರಿನ ಶಿಕ್ಷೆಗೊಳಗಾದ ನತಾಲಿಯಾ ತನ್ನ ಪತಿ, ಮಕ್ಕಳೊಂದಿಗೆ ಅಬ್ರೂಜಿಯಲ್ಲಿ ಕಳೆದ ದಿನಗಳ ನೆನಪಿನಲ್ಲಿ ಆ ಪ್ರಾಂತ್ಯದ ವಿಚಿತ್ರ ವಾತಾವರಣದ ಕಿರುನೋಟ ಕೊಟ್ಟಿರುವಂತೇ, ಅಲ್ಲಿನ ಗ್ರಾಮೀಣ ಜನರ ಬದುಕಿನ ಕಿರು-ಚಿತ್ರವನ್ನೂ ಈ ಪ್ರಬಂಧದಲ್ಲಿ ನೀಡಿದ್ದಾಳೆ.]

ಅಬ್ರೂಜಿಯಲ್ಲಿ ಎರಡೇ ಋತುಗಳು: ಬೇಸಿಗೆ ಮತ್ತು ಚಳಿಗಾಲ. ಸುರಿಯುವ ಹಿಮ ಮತ್ತು ಬೀಸುವ ಗಾಳಿಯಿಂದ ವಸಂತಋತು ಚಳಿಗಾಲದಂತಿರುತ್ತದೆ. ಸ್ವಚ್ಛವಾದ ಕಾವಿನಿಂದ ಶರದೃತು ಬೇಸಿಗೆಯಂತಿರುತ್ತದೆ. ಜೂನ್‌ನಲ್ಲಿ ಪ್ರಾರಂಭವಾಗುವ ಬೇಸಿಗೆ ನವೆಂಬರ್‌ನಲ್ಲಿ ಮುಗಿಯುತ್ತದೆ; ಬಿಸಿಲಿನ ದೀರ್ಘ ಹಗಲುಗಳು ಕಿರಿದಾಗುತ್ತಿರುತ್ತವೆ. ಬೆಟ್ಟಗಳು ಕಂದುತ್ತಿರುತ್ತವೆ. ಬೀದಿಗಳಿಂದ ಹಳದಿಯ ಧೂಳೇಳುತ್ತಿರುತ್ತದೆ. ಮಕ್ಕಳ ಆಮಶಂಕೆ ಭೇದಿ ಕೊನೆಗೊಳ್ಳುತ್ತಿರುತ್ತದೆ. ಚಳಿಗಾಲ ಆರಂಭವಾಗುತ್ತದೆ. ಜನ ಬೀದಿಗಳಲ್ಲಿ ವಾಸ ಮಾಡುವುದನ್ನು ನಿಲ್ಲಿಸುತ್ತಾರೆ: ಬರಿಗಾಲಿನ ಹುಡುಗರು ಚರ್ಚ್ ಮೆಟ್ಟಿಲ ಮೇಲೆ ಕಾಣದಾಗುತ್ತಾರೆ.

ನಾನು ಹೇಳುತ್ತಿರುವ ಈ ಭಾಗದ ಜನ ಸುಗ್ಗಿ ಮುಗಿದೊಡನೆ ಕಣ್ಮರೆಯಾಗುತ್ತ ಕೆಲಸ ಅರೆಸಿ ಟೆರ್ನಿ, ಸುಲ್ಮೊನ, ರೋಮಾಗಳತ್ತ ಹೋಗುತ್ತಾರೆ. ಗಾರೆ ಕೆಲಸಗಾರರಲ್ಲಿ ಸಾಕಷ್ಟು ಜನ ಈ ಪ್ರದೇಶದಿಂದ ಬರುವವರೇ. ಬಹಳಷ್ಟು ಮನೆಗಳನ್ನು ಇವರು ಅಂದವಾಗಿ ಕಟ್ಟಿರುತ್ತಾರೆ. ಸಣ್ಣ ಬಂಗಲೆಗಳಂತಿರುವ ಇವುಗಳಲ್ಲಿ ಬಿಸಿಲುಮಚ್ಚು ಮತ್ತು ಪುಟ್ಟ ಕಂಬಗಳೂ ಇರುತ್ತವೆ. ಇವುಗಳ ಒಳಗಡೆ ನೀವು ಪ್ರವೇಶಿಸಿದಾಗ ಧೂಳು ಕಸ ತುಂಬಿರುವ ವಿಸ್ತಾರವಾದ ಕೋಣೆಗಳೂ, ಬೆರಗುಗೊಳಿಸುವಷ್ಟು ದೊಡ್ಡವಾದ ಅಡುಗೆ ಕೋಣೆಗಳೂ, ಮಬ್ಬುಗತ್ತಲಿನಲ್ಲಿ, ಸೂರಿನಿಂದ ಇಳಿಬಿದ್ದಿರುವ ಹಂದಿ ತೊಡೆಗಳನ್ನೂ ಕಂಡು ನೀವು ಚಕಿತರಾಗುತ್ತೀರಿ. ಅಡುಗೆ ಕೋಣೆಗಳಲ್ಲಿ ಬೆಂಕಿಯೂ ಉರಿಯುತ್ತಿರುತ್ತದೆ. ಹಲವಾರು ತೆರನ ಬೆಂಕಿ : ಓಕ್ ಮರದ ಬೆಂಕಿ, ಎಲೆ-ಪುರುಳೆಗಳ ಬೆಂಕಿ, ಬೀದಿಗಳಿಂದ ಆಯ್ದ ಹಗ್ಗ-ನೂಲುಗಳ ಬೆಂಕಿ. ಇವರು ಉರಿಸುವ ಬೆಂಕಿಯನ್ನು

ಅನು : ಲಿಂಗರಾಜು

ನೋಡಿಯೇ ಯಾರು ಶ್ರೀಮಂತರು, ಯಾರು ಬಡವರು ಎಂದು ಹೇಳಬಹುದು-ತೊಟ್ಟಿರುವ ಬಟ್ಟೆಗಳು ಮತ್ತು ಕಾಲಿನ ಷೂಗಳಿಂದಲೂ ಸಹ.

ಈ ಪ್ರದೇಶಕ್ಕೆ ಮೊದಲ ಸಲ ನಾನು ಹೋದಾಗ ಎಲ್ಲರ ಮುಖಗಳೂ ನನಗೆ ಒಂದೇ ತರನಾಗಿ ಕಂಡವು. ಎಲ್ಲಾ ಹೆಂಗಸರು-ಶ್ರೀಮಂತರು ಮತ್ತು ಬಡವರು, ಪ್ರಾಯಂದವರು ಮತ್ತು ವಯಸ್ಸಾದವರು – ಒಬ್ಬರನ್ನೊಬ್ಬರು ಹೋಲುತ್ತಿದ್ದರು. ಸಾಕಷ್ಟು ಜನರ ಬಾಯಿಗಳಲ್ಲಿ ಹಲ್ಲುಗಳಿರಲಿಲ್ಲ. ದಾರಿದ್ರ್ಯದ ಒಂದು ಹೊತ್ತಿನ ಊಟ, ಆಯಾಸ, ಬಿಡುವಿಲ್ಲದ ಕೆಲಸದಲ್ಲೂ ಮಕ್ಕಳನ್ನು ಹೆರುವುದು, ಮೊಲೆಯೂಡು ವುದು ಅಂದರೆ ಹೆಂಗಸು ತನ್ನ ಮೂವತ್ತಗಳ್ಲೇ ಹಲ್ಲುಗಳನ್ನು ಕಳೆದುಕೊಂಡಿರುತ್ತಾಳೆ.

ದಿನಗಳೆದಂತೆ ಸೆಕೊಂಡಿನಾದಿಂದ ವಿನ್ಸೆನ್‌ಜೀನದವರೆಗೆ, ಅಡೋಲಿರಾಟದಿಂದ ಅನ್ನೂನ್‌ಜಿಯಾಟದವರೆಗೆ ನಾನು ಪ್ರಸಿದ್ಧಿ ಪಡೆದಿದ್ದೆ. ಆಗಾಗ ಕೆಲವರ ಮನೆಗಳಲ್ಲಿನ ಬೇರೆ ಬೇರೆ ತೆರನ ಬೆಂಕಿಯನ್ನು ಕಾಯಿಸಿಕೊಳ್ಳಲಾರಂಭಿಸಿದ್ದೆ.

ಮೊದಲಮಂಜು ಬೀಳಲಾರಂಭಿಸಿದಾಗ ಒಂದು ವಿಧದ ಖಿನ್ನತೆ ಮೌನದಲ್ಲೇ ನಮ್ಮನ್ನಾವರಿಸಿಕೊಂಡಿತ್ತು. ನಾವು ಗಡಿಪಾರಾಗಿದ್ದೆವು. ನಮ್ಮ ನಗರ ದೂರದಲ್ಲಿತ್ತು. ಹಲವು ಪುಸ್ತಕಗಳು, ಕೆಲವು ಸ್ನೇಹಿತರು, ಚೆಲ್ಲಾಪಿಲ್ಲಿಯಾಗಿ ಬಿದ್ದಿರುತ್ತಿದ್ದ ವಸ್ತುಗಳಲ್ಲೇ ನಮ್ಮ ನಿಜವಾದ ಜೀವನವಿತ್ತು. ಸೂರಿನ ಮೇಲಂಚಿಗೆ ಹೋಗಿದ್ದ ಉದ್ದ ಚಿಮಣಿಯ ಹಸಿರು ಸ್ಟೋವ್ ಹಚ್ಚಿ ಅದರ ನೆರವಿನಿಂದ ಅಡಿಗೆ ಮಾಡಿಕೊಳ್ಳುತ್ತಿದ್ದ ನಾವು ಆ ರೂಮಿನಲ್ಲಿಯೇ ಊಟ ಮಾಡುತ್ತಿದ್ದೆವು. ನನ್ನ ಪತಿ ದೊಡ್ಡ ದುಂಡು ಮೇಜಿನ ಮೇಲೆ ಬರೆಯುತ್ತಾ ಕೂರುತ್ತಿದ್ದರು. ಮಕ್ಕಳು ಹಜಾರದ ತುಂಬಾ ಆಟಿಕೆಗಳನ್ನು ಹರಡುತ್ತಿದ್ದರು. ಕೋಣೆಯ ಮೇಲಂಚಿನಲ್ಲಿ ಹದ್ದಿನ ಚಿತ್ರವೊಂದನ್ನು ಚಿತ್ರಿಸಿದ್ದರು. ನಾನು ಆ ಹದ್ದನ್ನು ನೋಡುತ್ತಾ ಅದೂ ಗಡಿಪಾರಾಗಿದೆ ಎಂದು ಯೋಚಿಸುತ್ತಿದ್ದೆ. ಗಡಿಪಾರಾದ ಹದ್ದು, ಹಸಿರು ಸ್ಟೋವ್‌ನ ಸರಭರ ಮೌನದಲ್ಲಿ ನಿಂತ ಸುತ್ತಲಿನ ಗುಂಡ್ಡಗಾಡು, ಹೆಪ್ಪುಗಟ್ಟಿರುತ್ತಿದ್ದ ಮಂಜು....

ಐದು ಗಂಟೆಗೆ ಸಾಂತಮರಿಯಾ ಚರ್ಚ್‌ನ ಗಂಟೆ ಬಾರಿಸುತ್ತಿತ್ತು. ಕಪ್ಪು ಶಾಲುಗಳನ್ನು ಹೊದೆಯುವ ಕೆಂಪು ಮುಖದ ಹೆಂಗಸರು ಪ್ರಾರ್ಥನೆಗೆ ಹೋಗುತ್ತಿದ್ದರು. ಪ್ರತಿ ಸಂಜೆ ನಾನು ಮತ್ತು ನನ್ನ ಪತಿ ವಾಕ್ ಹೋಗುತ್ತಿದ್ದೆವು, ಇಬ್ಬರೂ ಕೈ ಕೈ ಜೋಡಿಸಿ ನಡೆಯುತ್ತಿದ್ದೆವು. ನಮ್ಮ ಹೆಜ್ಜೆಗಳು ಮಂಜಿನಲ್ಲಿಳಿಯುತ್ತಿದ್ದವು. ಬೀದಿಯ ಆಚೀಚಿನ ಮನೆಯವರು ನಮಗೆ ಪರಿಚಯವಾಗಿದ್ದರು. ಬಾಗಿಲ ಬಳಿ ನಿಂತಿದ್ದವರು ನಮ್ಮ ಕುಶಲ ವಿಚಾರಿಸುತ್ತಿದ್ದರು. ಒಂದೊಂದು ಸಲ ಯಾರಾದರೊಬ್ಬರು ಕೇಳುತ್ತಿದ್ದರು, 'ನಿಮ್ಮ ಸ್ವಂತ ಊರಿಗೆ ಯಾವಾಗ ಹೋಗು

ತ್ತೀರಿ?' ನನ್ನ ಪತಿ ಉತ್ತರಿಸುತ್ತಿದ್ದರು, 'ಯುದ್ಧ ಮುಗಿದ ಮೇಲೆ.' 'ಯುದ್ಧ ಯಾವಾಗ ಮುಗಿಯುತ್ತೆ ಪ್ರೊಫೆಸರ್, ನಿಮಗೆ ಎಲ್ಲವೂ ಗೊತ್ತಿದೆಯಲ್ಲವಾ, ಇದು ಯಾವಾಗ ಮುಗಿಯುತ್ತೆ?' ನನ್ನ ಪತಿಯನ್ನು ಅವರು ಪ್ರೊಫೆಸರ್ ಎನ್ನುತ್ತಿದ್ದರು. ಏಕೆಂದರೆ ಇವರ ಹೆಸರನ್ನು ಅವರಿಂದ ಉಚ್ಚರಿಸಲಾಗುತ್ತಿರಲಿಲ್ಲ. ಕೆಲವು ವಿಷಯಗಳ ಬಗ್ಗೆ ಇವರ ಸಲಹೆ ಕೇಳಲು ಹಲವರು ತುಂಬಾ ದೂರದಿಂದಲೂ ಬರುತ್ತಿದ್ದರು. ಹಲ್ಲುಗಳು ಯಾವ ಕಾಲದಲ್ಲಿ ಹುಟ್ಟಿದರೆ ಒಳ್ಳೆಯದು, ನಗರಸಭೆ ಸಬ್ಸಿಡಿಯನ್ನು ಹೇಗೆ ಕೊಡುತ್ತದೆ, ತೆರಿಗೆ-ಕೆಲಸಕಾರ್ಯಗಳು ಮುಂತಾದವುಗಳ ಬಗ್ಗೆ ಕೇಳುತ್ತಿದ್ದರು.

ಮುದುಕನೊಬ್ಬ ಚಳಿಗಾಲದಲ್ಲಿ ನ್ಯೂಮೋನಿಯಾದಿಂದ ಸತ್ತಾಗ ಸಾಂತಮರಿಯಾದ ಗಂಟೆ ಸಾವಿನ ಸೂಚನೆ ನೀಡಿತ್ತು. ಬಡಗಿ ಡೊಮಿಂಕೋ ಶವಪೆಟ್ಟಿಗೆ ಮಾಡಿದ್ದ. ಒಬ್ಬ ಹೆಂಗಸು ಹುಚ್ಚಿಯಾದಳು. ಇವಳನ್ನು ಕೊಲಿಮಾಗಿಯೋದ ಹುಚ್ಚಾಸ್ಪತ್ರೆಗೆ ಸೇರಿ ಸಿದರು. ಸುತ್ತಲಿನ ಜನರಿಗೆ ಸ್ವಲ್ಪಕಾಲದವರೆಗೆ ಈ ವಿಷಯವೇ ಮಾತಿನ ವಸ್ತು ವಾಯಿತು. ಇವಳು ಇನ್ನೂ ಪ್ರಾಯದಲ್ಲಿದ್ದಳು. ಜಿಲ್ಲೆಯಲ್ಲೇ ಶುಚಿಯಿಂದ ಇರುತ್ತಿದ್ದ ಹೆಂಗಸು, ಅತಿಯಾಗಿ ಶುಚಿಯಿಂದ ಇರುತ್ತಿದ್ದುದೇ ಇವಳನ್ನು ಈ ಅವಸ್ಥೆಗೆ ತಂದಿತು ಎಂಬ ಮಾತಾಡಿದ್ದರು. ಅವಳಿ ಗಂಡುಮಕ್ಕಳನ್ನು ಹೊಂದಿದ್ದ ಕಲಿಡೋನಿಯಾಳಿಗೆ ಮತ್ತೆ ಅವಳಿ ಹೆಣ್ಣುಮಕ್ಕಳು ಹುಟ್ಟಿದ್ದವು. ಹಿತ್ತಲನ್ನು ವಿಸ್ತರಿಸಿಕೊಂಡಿದ್ದ ಕುಟುಂಬವೊಂದಕ್ಕೆ ಆಕ್ರಮಿಸಿಕೊಂಡಿರುವ ಜಾಗವನ್ನು ಬಿಟ್ಟು ಕೊಡಲಾಗುವುದಿಲ್ಲ ಎಂಬ ಗಲಭೆ ನಗರಸಭೆಯುಲ್ಲಿ ನಡೆದಿತ್ತು. ಸ್ಕೂಲಿನ ಆಯಾ ರೋಸಳ ಕಣ್ಣೊಂದನ್ನು ನೆರೆಮನೆಯ ಒಬ್ಬಳು ಗಾಯಗೊಳಿಸಿ ಇವಳು ಬ್ಯಾಂಡೇಜ್ ಕಟ್ಟಿಕೊಳ್ಳುವಂತೆ ಮಾಡಿದ್ದಳು, ಹಳೆದ್ವೇಷವೊಂದು ಇವಳ ಕಣ್ಣಿಗೇ ಆಪತ್ತು ತಂದಿತ್ತು. 'ಕಣ್ಣು ತುಂಬಾ ಸೂಕ್ಷ್ಮದ್ದು, ಇಲ್ಲಿಗೇ ತಿವಿದಳು' ಎಂದು ವಿವರಿಸಿದ್ದಳು. ಸ್ವಲ್ಪ ಹೊತ್ತು ಈ ವಿಷಯವನ್ನೇ ಮಾತಾಡಿದ್ದಳು. ನಾನು ಏನೂ ಹೇಳಲಿಲ್ಲ, ಮೌನವಾಗಿ ಕೇಳಿದ್ದೆ.

ಮನೆಯ ಹುಂಬಲ ದಿನದಿನಕ್ಕೂ ಹೆಚ್ಚತೊಡಗಿತು. ಕೆಲವು ಸಲ ಇದು ಮೈ ಮರೆಸುವಷ್ಟು ಹಿತವಾದ ಮಾತು ಕತೆಗಳಲ್ಲಿಯೂ ಸಾಗುತ್ತಿತ್ತು. ನಗರದಲ್ಲಿ ನಾವು ತೊರೆದು ಬಂದಿದ್ದವರಿಂದ ಮದುವೆ, ಸಾವು ಮುಂತಾದ ಸುದ್ದಿಗಳು ಪತ್ರಗಳಿಂದ ಬರುತ್ತಿದ್ದವು. ಎಷ್ಟೋಸಲ ಮನೆಯ ಹುಂಬಲ ಅತಿಯಾಗಿ ದುಃಖವನ್ನೂ ತರು ತ್ತಿತ್ತು. ದುಃಖ ಈರ್ಷ್ಯೆಯಂತ್ತ ಹೊರಳುತ್ತಿತ್ತು. ಡೋಮಿಂಕೋ, ಕಲಿಡೋನಿಯಾ, ಅನ್ನೂನ್‌ಜಿಯಾಟಾ, ಸಾಂತಮರಿಯಾದ ಗಂಟೆ ಸದ್ದು ಎಲ್ಲದರ ಮೇಲೂ ದ್ವೇಷ ಮೂಡುತ್ತಿತ್ತು. ಇದು ಸರಿಯಲ್ಲ ಎಂದು ತಿಳಿಯುತ್ತಿದ್ದೆವು. ಇದನ್ನು ಮರೆಸು ವಂತೆ ಸದಾಕಾಲ ಜನ ಮನೆಗೆ ಬಂದು ತುಂಬಿಕೊಂಡಿರುತ್ತಿದ್ದರು. ಸೌಹಾರ್ದ

ಮಾತುಕತೆಗೆ ಬರುತ್ತಿದ್ದವರಂತೇ ಮಾಮೂಲಿನ ಸಲಹೆ ಕೇಳುವವರೂ ಇರುತ್ತಿದ್ದರು.

ಕೆಲವು ಸಲ ಸಾರ್ತ ನಮಗಾಗಿ ವಿಶೇಷವಾದ ಸಿಹಿತಿನಿಸುಗಳನ್ನು ಮಾಡುತ್ತಿದ್ದಳು. ಕೊರಳಸುತ್ತ ಬಟ್ಟೆಯೊಂದನ್ನು ಸುತ್ತಿಕೊಂಡಿರುತ್ತಿದ್ದ ಇವಳು ಕೋಳಿಗಳನ್ನು ಬೆರೆಸಾಡುತ್ತಿದ್ದಳು. ದೂರದ ಕ್ರೊಸೆಟಾಗೆ ಹೋಗುವವರಿಗೆ ದೊಡ್ಡ ಬೋಗುಣಿಯೊಂದನ್ನು ತಂದುಕೊಡಲು ಕೇಳುತ್ತಿದ್ದಳು. ಇವಳ ಕೆಂಪುಮುಖ ಮತ್ತು ಕಣ್ಣುಗಳು ಮಾಡುತ್ತಿರುವ ಕೆಲಸವನ್ನು ಬೇಗ ಮುಗಿಸುವ ಕಾತರವನ್ನೇ, ತುಂಬಿಕೊಂಡಿರುತ್ತಿದ್ದವು. ಸಿಹಿತಿನಿಸನ್ನು ಮಾಡಿದ ಮೇಲೆ ಇವಳು ಖುಷಿಯಿಂದ ಹೊರಗೆ ನಿಲ್ಲುತ್ತಿದ್ದಳು. ಇವಳ ಬಟ್ಟೆ ಮತ್ತು ಕೂದಲುಗಳು ಧೂಳಿನಿಂದ ಬಿಳಿಯಾಗಿರುತ್ತಿದ್ದವು. ಮಾಡಿದ್ದ ತಿನಿಸುಗಳನ್ನು ಜೋಪಾನವಾಗಿ ಒಯ್ದು ತನ್ನ ಪತಿ ಬರೆಯುವ ದೊಡ್ಡ ದುಂಡು ಮೇಜಿನ ಮೇಲಿರಿಸುತ್ತಿದ್ದಳು.

ಈ ಸಾರ್ತ ನಮ್ಮ ಮನೆಕೆಲಸದ ಹೆಂಗಸು. ಇವಳ ಹೆಸರು ಕ್ರೊಸೆಟಾ. ಇವಳು ಹೆಂಗಸು ಎನ್ನುವಂತಿರಲಿಲ್ಲ. ಇನ್ನೂ ಹದಿನಾಲ್ಕು ವರುಷದವಳು. ಸಾರ್ತ–ದರ್ಜಿ–ಜಗತ್ತನ್ನು ಎರಡು ಗುಂಪಾಗಿ ಬೇರ್ಪಡಿಸುತ್ತಿದ್ದಳು. ತಲೆಗೂದಲನ್ನು ಬಾಚಿಕೊಳ್ಳುವವರು ಮತ್ತು ಬಾಚಿಕೊಳ್ಳದಿರುವವರು ಎಂದು. ಹೀಗೆ ನೋಡುವುದು ಅವಶ್ಯವೂ ಆಗಿತ್ತು. ಏಕೆಂದರೆ ಯಾರು ತಲೆಗೂದಲನ್ನು ಬಾಚಿಕೊಳ್ಳುವುದಿಲ್ಲವೋ ಅವರು ಹೇನುಗಳನ್ನು ಹೊಂದಿರುತ್ತಿದ್ದರು. ಕ್ರೊಸೆಟಾ ತನ್ನ ತಲೆಗೂದಲನ್ನು ಬಾಚಿಕೊಳ್ಳುತ್ತಿದ್ದಳು. ಕೆಲಸಕ್ಕಾಗಿ ಬರುತ್ತಿದ್ದವಳು ನಮ್ಮ ಮಕ್ಕಳಿಗೆ ಸಾವು–ಮರಣದ ಕತೆಗಳನ್ನು ಹೇಳುತ್ತಿದ್ದಳು. ಒಂದಾನೊಂದು ಕಾಲದಲ್ಲಿ ತಾಯಿ ಸತ್ತುಹೋಗಿರುವ ಹುಡುಗನೊಬ್ಬನಿದ್ದ. ಇವನ ತಂದೆ ಮತ್ತೊಬ್ಬ ಹೆಂಡತಿಯನ್ನು ತಂದ ಈ ಮಲತಾಯಿ ಪುಟ್ಟ ಹುಡುಗನನ್ನು ಪ್ರೀತಿಸುತ್ತಿರಲಿಲ್ಲ. ಇವನ ತಂದೆ ದೂರಕ್ಕೆ ಹೋಗಿದ್ದಾಗ ಪುಟ್ಟ ಹುಡುಗನನ್ನು ಕೊಂದು ಕುದಿನೀರಿನಲ್ಲಿ ಬೇಯಿಸಿದಳು. ಇವನ ತಂದೆ ರಾತ್ರಿ ಊಟಕ್ಕೆ ಬಂದ. ಊಟ ಮುಗಿಸುವ ಮುನ್ನವೇ ತಟ್ಟೆಯಿಂದ ಎದ್ದ ಮೂಳೆಗಳು ಹಾಡಲು ಆರಂಭಿಸಿದವು.

ಸಿಡಿಮಿಡಿಗುಟ್ಟುವ ಸಿಡುಕಿನ ಅಮ್ಮ
ಅಡುಗೆಯ ಮಡಕೆಲಿ ಹಾಕಿದಳೆನ್ನ,
ಸವಿಸವಿಯಾಗಿ ಬೆಂದೆನು ನಾನು
ತಿನ್ನಲು ಕುಳಿತನು ಹಸಿವಿನ ಅಪ್ಪ,

ಆಮೇಲೆ ಆ ತಂದೆ ತನ್ನ ಹೆಂಡತಿಯನ್ನು ಕೊಂದು ಬಾಗಿಲ ಬಳಿ ಮೊಳೆಗೆ ನೇತು ಹಾಕಿದ. ಕತೆಯೊಳಗಿನ ಹಾಡನ್ನು ಸಾಕಷ್ಟು ಸಲ ನನ್ನಲ್ಲೇ ಗುನುಗಿಕೊಳ್ಳುತ್ತಿದ್ದೆ. ಹೀಗೆ ಕುಳಿತಿರುವಾಗ ಇಡೀ ದೇಶವೇ ಕಣ್ಣೆದುರು ನಿಲ್ಲುತ್ತಿತ್ತು. ಇದರದೇ ಆದ ಕಾಲ ಮಾನಗಳು, ಧೂಳು ತುಂಬಿದ ಗಾಳಿ, ಗಂಟೆಯ ಸದ್ದು ಎಲ್ಲವೂ ಕಣ್ಣಿಗೆ ಕಟ್ಟುತ್ತ ಕಿವಿಗೆ ಕೇಳಿಸುತ್ತಿತ್ತು.

ದಿನವೂ ಮುಂಜಾನೆ ನಾನು ಮಕ್ಕಳ ಜೊತೆ ವಾಕ್ ಹೋಗುತ್ತಿದ್ದೆ. ಚಳಿ ತುಂಬಿದ ಹಿಮದಲ್ಲಿ ಆಟ ಆಡಲು ಹೋಗುತ್ತಿದ್ದ ಮಕ್ಕಳನ್ನು ಬಲವಂತದಿಂದ ತಡೆದು ನಿಲ್ಲಿಸುತ್ತಿದ್ದೆ. 'ಈ ಬಡಪಾಯಿಗಳು ಏನು ಪಾಪ ಮಾಡಿದ್ದವು?' ಜನ ಕೇಳುತ್ತಿದ್ದರು. 'ಇದು ವಾಕ್ ಹೋಗೋ ಸಮಯವಲ್ಲ ಮೇಡಂ. ಮನೆಗೆ ಹೋಗಿ.' ಬೆಳ್ಳನೆಯ ಬಯಲು ಪ್ರದೇಶದಲ್ಲಿ ನಾನು ತುಂಬಾ ದೂರ ನಡೆದು ಹೋಗುತ್ತಿದ್ದೆ. ದಾರಿಯಲ್ಲಿ ನಮ್ಮನ್ನು ಸಂಧಿಸುತ್ತಿದ್ದ ಕೆಲವರು ಮಕ್ಕಳನ್ನು ಕರುಣೆಯಿಂದ ನೋಡುತ್ತಿದ್ದರು. 'ಇವರು ಏನು ಪಾಪ ಮಾಡಿದ್ದರು?' ಅವರು ಕೇಳುತ್ತಿದ್ದರು. ಚಳಿಗಾಲದಲ್ಲಿ ಮಗು ವೊಂದು ಹುಟ್ಟಿದರೆ ಬೇಸಿಗೆ ಬರುವವರೆಗೂ ಇವರು ಆ ಮಗುವನ್ನು ಹೊರಕ್ಕೇ ತರು ತ್ತಿರಲಿಲ್ಲ. ಮಧ್ಯಾಹ್ನದ ಹೊತ್ತಿಗೆ ನನ್ನವರು ಪೋಸ್ಟ್‌ನೊಂದಿಗೆ ಬಂದು ನಮ್ಮ ಜೊತೆ ಗೂಡುತ್ತಿದ್ದರು. ನಾವು ಮನೆಗೆ ಮರಳುತ್ತಿದ್ದೆವು.

ಮಕ್ಕಳಿಗೆ ನಮ್ಮ ಮನೆ–ನಗರದ ಬಗ್ಗೆ ಹೇಳುತ್ತಿದ್ದೆ. ನಾವು ಮನೆ ಬಿಟ್ಟು ಬಂದಾಗ ಅವರಿನ್ನೂ ತುಂಬಾ ಚಿಕ್ಕವರು. ಅವರಿಗೆ ಯಾವ ನೆನಪೂ ಇರಲಿಲ್ಲ. ನಗರ ದಲ್ಲಿ ತುಂಬಾ ಅಂತಸ್ತಿನ ಮನೆಗಳಿವೆ. ಸಾಕಷ್ಟು ರಸ್ತೆಗಳು ಮತ್ತು ಲೆಕ್ಕವಿಲ್ಲದಷ್ಟು ಮನೆಗಳಿವೆ. ದೊಡ್ಡದಾದ ಅಂದದ ಅಂಗಡಿಗಳೂ ಇರುತ್ತವೆ. 'ಇಲ್ಲಿ ಇರೋದು ಗೀರೋನ ಅಂಗಡಿ'–ಮಕ್ಕಳು ಕೇಳುತ್ತಿದ್ದರು.

ಗೀರೋನ ಅಂಗಡಿ ನಮ್ಮ ಮನೆಯ ಎದುರಿಗೇ ಇತ್ತು. ಮುಂದಿಗೂಬೆಯಂತೆ ಬಾಗಿಲಬಳಿಯೇ ನಿಂತಿರುತ್ತಿದ್ದ ಗೀರೋ ಯಾವಾಗಲೂ ರಸ್ತೆಯ ಉದ್ದಕ್ಕೂ ನೋಡು ತ್ತಲೇ ಇರುತ್ತಿದ್ದ. ಇವನು ಎಲ್ಲವನ್ನೂ ಮಾರಾಟ ಮಾಡುತ್ತಿದ್ದ. ಕಿರಾಣಿ ಸಾಮಗ್ರಿ ಗಳು, ಕ್ಯಾಂಡಲ್‌ಗಳು, ಪೋಸ್ಟ್‌ಕಾರ್ಡ್‌ಗಳು, ಶೂಗಳು, ಕಿತ್ತಳೆ ಮುಂತಾಗಿ. ಇವನು ಎಸೆಯುವ ಕೊಳಕು ಕಿತ್ತಳೆಗಳನ್ನು ತಿನ್ನಲು ಮಕ್ಕಳು ಓಡಿಹೋಗುತ್ತಿದ್ದರು. ಕ್ರಿಸ್ ಮಸ್‌ಗೆ ಮಾದಕಪಾನೀಯ, ಸಿಹಿತಿನಿಸುಗಳು ಬರುತ್ತಿದ್ದವು. ತನ್ನ ಬೆಲೆಗಳಲ್ಲಿ ಇವನು ಒಂದಿಷ್ಟೂ ರಿಯಾಯಿತಿ ಕೊಡುತ್ತಿರಲಿಲ್ಲ. 'ಗೀರೋ ನೀನು ಎಂಥವನಪ್ಪ?' ಹೆಂಗಸರು ಹೇಳುತ್ತಿದ್ದರು.

ಕ್ರಿಸ್‌ಮಸ್‌ನಲ್ಲಿ ಟರ್ನಿ, ಸಲ್ಮೋನ, ರೋಮಾಗಳಿಂದ ಜನ ಮರಳಿ ಬರುತ್ತಿದ್ದರು. ಕೆಲವೇ ದಿನಗಳ ಮಟ್ಟಿಗೆ ಹೋಗಿದ್ದವರು ಮತ್ತೆ ಬಂದು ನೆಲೆಯೂರುತ್ತಿದ್ದರು. ಜೊತೆಯಲ್ಲಿ ಕೊಲ್ಲಲು ಹಂದಿಗಳನ್ನೂ ತಂದಿರುತ್ತಿದ್ದರು. ಒಂದಿಷ್ಟು ದಿನ ಇವರೆಲ್ಲಾ ಸ್ಪ್ರರೋಜಿಗೆ ಹೊಸತಾಗಿ ಬೇರೆ ಏನನ್ನೂ ತಿನ್ನುತ್ತಿರಲಿಲ್ಲ. ನಂಬಲು ಸಾಧ್ಯವಾಗದಂತೆ ಸದಾಕಾಲ ಸಾಸ್ ಕುಡಿಯುತ್ತಿದ್ದರು. ಬೀದಿಗಳಲ್ಲಿ ಹಂದಿಗಳ ಕೀರಲು ಕೂಗೇ ಕೇಳಿ ಬರುತ್ತಿತ್ತು.

ಫೆಬ್ರವರಿಯಲ್ಲಿ ಗಾಳಿ ತಂಪಿನಿಂದ ನಯವಾಗಿರುತ್ತಿತ್ತು. ಆಗಸದಲ್ಲಿ ಬಿಳಿಮೋಡಗಳು ತೇಲಿ ಹೋಗುತ್ತಿದ್ದವು. ಚರಂಡಿಗಳು ವರುಷದಲ್ಲಿ ಮೊದಲ ಸಲ ಹರಿಯಲಾರಂಭಿಸುತ್ತಿದ್ದವು. ಆಮೇಲೆ ಎಲ್ಲಾ ಮನೆ, ರೂಮುಗಳಿಂದ ಕೊಳಕು ನೀರು ಹರಿದು ಬರುತ್ತಿತ್ತು. ಸುತ್ತೆಲ್ಲಾ ಈ ಕೊಳಕೇ ಆವರಿಸಿಕೊಳ್ಳುತ್ತಿತ್ತು. ಹೆಂಗಸರು ಕಸವ ಬಕೇಟುಗಳನ್ನು ಕಿಟಕಿಗಳಿಂದ ಹೊರತೂರುವಂತೇ ನೀರನ್ನು ಮುಂಬಾಗಿಲಲ್ಲಿ ಚೆಲ್ಲುತ್ತಿದ್ದರು. ಅಗಲಿಸಿದ ಕೊಡೆಗಳನ್ನಿರಿಸಿಕೊಳ್ಳುತ್ತಿದ್ದವರು ಹಗಲಿನಲ್ಲಿ ನಿದ್ದೆ ಹೋಗುತ್ತಿದ್ದರು. ಡೊಮಿಂಕೋ ಇದನ್ನು ಯಾವುದೋ ಪಾಪಗಳಿಗೆ ಶಿಕ್ಷೆ ಎನ್ನುತ್ತಿದ್ದಳು. ಇದು ಒಂದು ವಾರದಲ್ಲಿಯೇ ಮುಗಿಯುತ್ತಿತ್ತು. ಆಮೇಲೆ ಎಲ್ಲಾ ಸೂರುಗಳಲ್ಲಿ ಹಿಮ ಕಟ್ಟಿಕೊಳ್ಳುತ್ತಿತ್ತು. ಚರಂಡಿಗಳು ಮುಚ್ಚಿಕೊಳ್ಳುತ್ತಿದ್ದವು.

ಚಳಿಗಾಲ ಕೊನೆಗೊಂಡಾಗ ನಮ್ಮ ಚಡಪಡಿಕೆ ಹೆಚ್ಚಾಗಿತ್ತು. ನಮ್ಮನ್ನು ಹುಡುಕಿ ಯಾರಾದರೊಬ್ಬರು ಬರಬಹುದು, ಕೊನೆಗೂ ಸಂತೋಷ ಬರುವಂತಿದೆ. ನಮ್ಮ ಗಡೀಪಾರು ಸದ್ಯದಲ್ಲೇ ಕೊನೆಯಾಗಲಿದೆ. ಜಗತ್ತಿನಿಂದ ನಮ್ಮನ್ನು ಬೇರ್ಪಡಿಸಿರುವ ರಸ್ತೆಗಳು ಕೂಡುವಂತಿವೆ. ಫ್ರೋಸ್ಟ್ ಆದಷ್ಟು ಬೇಗ ಬರಲಾರಂಭಿಸುತ್ತದೆ. ಚಳಿಯಿಂದ ಒಡೆಯುತ್ತಿರುವ ನಮ್ಮೆಲ್ಲರ ಕಾಲುಗಳೂ ನಿಧಾನವಾಗಿ ಸರಿಹೋಗುತ್ತವೆ ಎನಿಸುತ್ತಿತ್ತು. ಮಾಸವನ ಪರಿಪಾಟಲುಗಳು ಒಂದೇ ತೆರನಾಗಿರುತ್ತವೆ. ನಮ್ಮ ಜೀವನ ಬದಲಾಯಿಸಲಾಗದ ಹಳೆ ನೀತಿ ನಿಯಮಗಳಿಗೇ ಒಳಪಟ್ಟಿರುತ್ತದೆ. ನಮ್ಮ ಎಲ್ಲಾ ಕನಸುಗಳೂ ದಿಟವಾಗುವಂಥವಲ್ಲ.

ಅಬ್ರೂಜಿಯಿಂದ ಮರಳಿ ಬಂದ ಕೆಲವು ತಿಂಗಳನಂತರ ರೋಮಾದ ರೆಗಿನಾ ಕೋಲಿಯ ಸೆರೆಮನೆಯಲ್ಲಿ ನನ್ನ ಪತಿ ಸಾವನ್ನಪ್ಪಿದ್ದರು. ಸಾವಿಗೆ ಮುನ್ನ ಕ್ರೌರ್ಯವನ್ನೂ ಎದುರಿಸಿದರು. ಇದು ನಮಗೂ ಸಂಭವಿಸೀತೇ ಎಂದುಕೊಂಡಿದ್ದೆ—ನಮಗೂ ಗೀರೋ ಎಸೆಯುವ ಕಿತ್ತಳೆಗಳಂಥವನ್ನು ಆಯುವ, ಹಿಮದಲ್ಲಿ ಓಡಿಹೋಗುವ ಪಾಡು ಬಂದೀತೇ ಎನಿಸಿತ್ತು.

ಆದರೆ ತಾನು ಅಬ್ರೂಜಿಯಲ್ಲಿ ಸಂತೋಷದ ದಿನಗಳನ್ನು ಕಳೆದೆ. ನನ್ನ ಜೀವನದಲ್ಲೇ ಒಳ್ಳೆಯ ದಿನಗಳವು ಎಂಬುದು ಈಗ ನನಗೆ ಅರಿವಾಗಿದೆ. ●

# ಮೇಜು, ಪಾಠ ಮತ್ತು ಹುಡುಗರು

ದಿನವು ಕಲರವದಿ ಉಲಿವ ತುಂಬು
ಹಸಿರು ಹೆರಳ ಮೇಜು. ಕಪ್ಪು ಹಲಗೆಯ ಮೇಲೆ
ಚಿಗುರ ಬೆರಳಲ್ಲಿ ಬಿಳಿಯ ಹೂಗಳ ಪಾಠ
ಕಣ್ಣು ಚಾಚಿದಷ್ಟೂ ಪೊದೆ ಕಾಡು ಕಣಿವೆ
ಗಿರಿಗಳ ದುಂಡು ಮಾಟ.
ಸುತ್ತ ಮಲಗಿದ ಮೌನಕ್ಕೆ ಸದ್ದಿನ ಗುದ್ದು
ಜಡಿದು ಕೈಕಾಲ ಕೊಚ್ಚಿ
ಕೇಕೆ ಹಾಕುವ ಮುಚ್ಚು ಹಿಡಿದ
ಗಂಡು ಹುಡುಗರ ಮಾತು.
ಸುತ್ತಿದ ಸೆರಗ ಕಿತ್ತು ಕಪ್ಪು
ರಾಟೆಯ ಹೊಗೆಯ ನೇಯುವ ಹುಚ್ಚು
ಹರಿದ ಸೂರಿಂದ ಮುಖಕ್ಕೆ
ರಾಚಿದ ರಣಬಿಸಿಲು
ಮುಚ್ಚಿದ ಬಾಗಿಲ ಕತ್ತಲೊಳಗೆ
ಎಲ್ಲ ಬಿಟ್ಟ ಸುರುಳಿ ಹೊಗೆಯ ಧಗೆ
ಯಾರೊ ಬಿಟ್ಟ ರಾಕೆಟ್ಟಿನ ನಗೆ !
ಅಲುಗದೆ ನಿಂತ ಫ್ಯಾನು
ಇಡೀ ಕ್ಲಾಸು ಹೊರಗೆ ಬಿದ್ದ ಮೀನು.
ಕದ್ದು ಸೀರೆ ಮೊಳ ಲೆಕ್ಕಹಾಕಿದವರಲ್ಲೊಬ್ಬ
ಹರಾಜು ಹಾಕಿಯೇ ಬಿಟ್ಟ !
ಹನ್ನೆರಡರ
ಢಣ....ಢಣ....ಢಣ....
ಗಂಟೆ ಎಲ್ಲ ತಲೆಗಳ ಏರಿ
ಬಡಿಯತೊಡಗಿತು.

— ಎಸ್. ಸಿರಾಜ್ ಅಹಮದ್

---

ಎಸ್. ಸಿರಾಜ್ ಅಹಮದ್, II ಬಿ.ಎ. (EKL), 44, ನ್ಯೂ ಮುಸ್ಲಿಂ ಹಾಸ್ಟೆಲ್
ಸರಸ್ವತಿಪುರಂ, ಮೈಸೂರು–9

# ಮುಟ್ಟಾಟ

–1–

ಏಳೂರು ಅಗಲದ ಆಲದಂತೆ
ಜೋಳಿಗೆ ಹೆಗಲಲ್ಲಿ
ನಿದ್ದೆ ಸೇರದ ಕಂದ ತೊಟ್ಟಿಲಲ್ಲಿ
ತಲೆ ಮುಟ್ಟಿ ಭೂಮಿ ನೋವು
ಬಿದ್ದ ಜಾಗಕ್ಕೆ ಉಗುಳು
ಎಡಗಾಲ ಮೂರು ಒದೆಗಳು
ಕಂದನ ಕೂಗು ಕಣ್ಣೀರ ಗಡಿಗೆ ಒಡೆದು
ತಾಯಿ ಕೂಲಿಂದ ಬರಲಿಲ್ಲ ಬಾಗಿಲು ತೆಗೆದು
ಹೆತ್ತ ತಾಯಿ ಕಣ್ಣೀರು
ಸೆರಗು ತುಂಬಾ
ಎಷ್ಟು ಹೊಟ್ಟೆ ಉರಿ ?
ಜಗ್ಗಿ ಎಳೆದು ಕೂಗಿ ಅಂಬಾ
ಕಾಲಿನ ಬರ ವೇಳೆ ತುಂಬಾ
ಮುಟ್ಟೆಂದು ಅಳುತ್ತಿದ್ದ, ನಿಲ್ಲಿಸಿದ ಮುಟ್ಟಲು
ಗೆಲವು ಜೊತೆಗೆ ಬಾಯಿಂಗೆ ಬಟ್ಟಲು

–2–

ಕಲ್ಲು ಕರಗಿ ಗೊಂದಾಗಿ
ಮಣ್ಣು ಮಲಗಿ ಬೆಂಡಾಗಿ
ಗುಡಿಸಲು ಬೈತಲೆ ಬಾಚಿ
ಆಕಳಿಸಿತ್ತು ಮಾಗಿ ಆಲ
ನೇರ ಬಳ್ಳಿ ನಾಪತ್ತೆ, ಕೃಷಿ
ನೇಗಿಲು ನಾಲಿಗೆಯಾಗಿ
ಏಳು ಏಣಿ ಮೂರ್ತಿ ಒಳಗೆ ಜೀವ
ಕಣ್ಣು ಪಾಪೆ ಗೋಲಿಯಾಟದ ಗೋಲಿ
ಕಲ್ಲು-ಕೋಳಿ ಹೇಲಿನಾಟ

ಗಂಗಾರಾಂ ಚಂಡಾಳ

ಕಲ್ಲಿಗೆ ಹೇಲು ಮುಟ್ಟಿದರೂ
ಮುಟ್ಟಿಲು;
ಒಡಾಟ ನೆಲದಲ್ಲಿ ನೆರಳಾಗಿ
ಮರಳ ಕಣವಾಗಿ
ಕತ್ತಿ ಕೊಯ್ತು ಕಲ್ಲಿಗೆ
ತತ್ತಿ ಊಟ ಬಾಯಿಂಗೆ
ಒರೆಕೋರಾಗಿ ಉಪ್ಪುರಪಟ್ಟೆ
ಗೆರೆಗಳಲ್ಲಿ ಗೆರೆಗಳಂತೆ ಓಟ
ಓಟದಲ್ಲಿ ಮುಟ್ಟಿದರೆ ಔಟ್
ಉಪ್ಪೊ-ತಪ್ಪೊ
ಮುಟ್ಟು; ಮುಟ್ಟಿಸಿಕೊಂಡರೆ ಸೋಲು
ದೂರವಿಟ್ಟರೆ ಗೆಲವು
ಅಗ್ರಜ-ಅಸ್ಪೃಶ್ಯ.

— ಗಂಗಾರಾಂ ಚಂಡಾಳ

## ಕೆ. ಎಚ್. ಶ್ರೀನಿವಾಸ್‌ರವರ ಎರಡು ಕವನಗಳು

### 'ಎನ್ನೆದೆಯ ದ್ವೀಪ'

ಮನಸ ಹಸಿ ಮಾಡಿ ಹಸೆ ಹಾಸಿ ಕರೆದಾಗ
ಹೆಜ್ಜೆ ಹೆಜ್ಜೆಗೂ ಮೂಡಿತೊಂದೊಂದು ಕವಿತೆ
ಗೆಜ್ಜೆ ಗೆಜ್ಜೆಯ ಒಳಗೂ ಅಡಗಿದ್ದ ನಾದ ಹೊರ ಹೊಮ್ಮಿ ಕಣಿದಾಗ
ಹೊತ್ತಿಕೊಂಡಿತು ಸುತ್ತ ಸಾಲಾಗಿ ಹಣತೆ

ಬೇಸಿಗೆಯು ಬಿಸಿಲ ಬೆಂಕಿಯಲ್ಲಿ ಬೆಂದು ಬೆಂಡಾದ ನೆಲ
ಬಯಸಿತ್ತು ಸಿಹಿನೀರ ಒರತೆ
ಮಳೆ ಬಿದ್ದು ಕೆಸರಲ್ಲಿ ಹಸಿರು ಚಿಗುರೊಡೆಯುಂತಿರೆ
ಮತ್ತೊಂದು ಬಸಿರ ಬಯಕೆ

ಕೆ.ಎಚ್. ಶ್ರೀನಿವಾಸ್, ನಂ. 236, ರಾಜ್‌ಮಹಲ್ ವಿಲಾಸ, ಬೆಂಗಳೂರು-80

ಎಲ್ಲಿಂದಲೋ ಭಾವಗಳು ರೆಕ್ಕೆ ಬಡಿಯುತ್ತ ಬಂದೆನ್ನ
ಎದೆಯ ದಿಬ್ಬದಿ ತಂಗಿ, ಪ್ರಣಯವಾಡಿ
ಮೊಟ್ಟೆಗಳನ್ನಿಟ್ಟದಕೆ ಕಾವು ಕೊಟ್ಟೊಡೆದು ಮೂಡಿದ
ಕವನಗಳ ಚಿಲಿ ಪಿಲಿಯ ಮೋಡಿ

ಮತ್ತೆ ಮತ್ತದನು ನಾ ಹುಚ್ಚನಂತೊಳಗೊಳಗೆ
ರಾಗದಲಿ ಹಾಡಿ ಹಾಡಿ
ಬಲಿದ ರೆಕ್ಕೆಯ ಬಿಚ್ಚಿ ಬಡಿಯುತ್ತ ಬಿಟ್ಟೆದೆಯ
ಹಾರುತಿವೆ ಸ್ವಚ್ಛಂದದಾಗಸದಿ ನೋಡಿ

ಎಲ್ಲಿಂದಲೋ ಬಂದಿದ್ದು ಮತ್ತೆಲ್ಲಿಗೋ ಹಾರಿ
ಬರಿದಾದ ಮರಳ ನೆಲವಾಯ್ತು ಎನ್ನೆದೆಯ ದ್ವೀಪ
ತಂಪಾದ ಗೂಡಿಂದುಲಿದ ಇಂಪು ದನಿಗಳು ಅಡಗಿ
ಬಟ್ಟ ಬಯಲ ಉರಿಬಿಸಿಲ ಶಾಪ

ಎನ್ನೊಳವ ಬಗೆದು ಆಳದಲಿ ಹುಗಿದಿಟ್ಟು
ಸತ್ತ ಪ್ರಣಯದ ನೆನಪ
ಮತ್ತೆ ಹುಟ್ಟಿನ ಬೆಳಗ ಕಾಯುತ್ತ ಕತ್ತಲೊಳು
ಹಚ್ಚಿ ಇಟ್ಟಿಹೆನೊಂದು ಪುಟ್ಟ ದೀಪ

## 'ನಾನೊಂದು ದಡ, ನೀನಿನ್ನೊಂದು ದಡ'

ಪ್ರಿಯೆ, ನಾನೊಂದು ದಡ
            ನೀನಿನ್ನೊಂದು ದಡ
ಅಲ್ಲಲ್ಲಿ ಅಂಕು ಡೊಂಕು, ಬಳ್ಳಿ ಬಳುಕು, ಮರಗಿಡ

ಒಬ್ಬರಲ್ಲೊಬ್ಬರು ಪ್ರೀತಿಗಾಗಿ ಹುಡುಕಿ, ತಡಕಾಡಿ
ಎಣೆಯಾಡಿ, ಹೆಣೆದು ಕಟ್ಟಿದ ಸಂಸಾರ ಸೇತುಬಂಧ

ಇದ್ದರೂ, ಎಲ್ಲಿಯೂ ಇಬ್ಬರೊಂದೇ ಎನಿಸಿ ಬೆಸೆದುಕೊಳ್ಳಲಾಗದ
ಸಮಾನಾಂತರ ನಮ್ಮ ಒಳ ಬಾಳ ಅಂತರಂಗ

'ಶಹ'ದ ಹೊಡೆತಕ್ಕೆ ಲೈಫ್‌ಮೋಟುಗಳ ಚೆಕ್ ಮೇಟಾಗಿ
ಸೋತು ಹೋಗಿದ್ದೇವೆ ಬದುಕ ಚದುರಂಗ

ನಮ್ಮಿಬ್ಬರ ನಡುವಿನ ಮರಳ ದಿಬ್ಬದ ಮಧ್ಯೆ ಈಗ ಬೆಡಗಿಲ್ಲದೇ
ಬಡವಾಗಿ ಹರಿಯುತ್ತಿರುವ ಈ ಪ್ರೀತಿಯು ಹೊಳೆ

ಭರ್ಜರಿ ಮಾನ್ಸೂನು ಮಳೆ ಹೊಯ್ದು, ಕಳೆ ಕೊಳೆಗಳನು ಸುಳಿ ಸುತ್ತಿ
ಸೆಳೆದು ಮೈತುಂಬಿ ತುಳುಕಿದ್ದುಂಟು

ಸುತ್ತ ಮುತ್ತಲೂ ಹಚ್ಚ ಹಸುರಿನ ಪುಳಕ ಹುಚ್ಚೆಬ್ಬಿಸಿದ್ದುಂಟು

ಹೆಜ್ಜೆ ಹೆಜ್ಜೆಗೂ ಒಂದು ಗೆಜ್ಜೆ ಗಿಡ ಚಿಗುರಿ ನರ್ತಿಸಿ
ಸುಗ್ಗಿ ಮನ ಹಿಗ್ಗಿ ಬುಗುರಿಯಾಡಿದ್ದುಂಟು

ಭೋರ್ಗರೆದು ಬರಸೆಳೆವ ಪ್ರವಾಹವ ತಬ್ಬಿ
ಉನ್ಮಾದದಲೆಯೇರಿ ನಾವಿಬ್ಬರೂ ತೇಲಿ ಹೋದದ್ದುಂಟು

ಅದೆಲ್ಲ ಕಳೆದಿದ್ದು;
ದಿನಗಳು, ಗಂಟೆಗಳು, ನಿಮಿಷಗಳು, ಕ್ಷಣಗಳು
ನಿರಂತರವಲ್ಲ;
ನಂತರ ಉಳಿದಿದ್ದು

ಪ್ರವಾಹದ ಹಾವಳಿ ಬಳುವಳಿ ನೀಡಿದ ಭೂ ಕೊರೆತದ ಘಾಯಗಳು
ಸುಖದ ತೆರೆಗಳಪ್ಪಳಿಸಿದ ನೆನಪಿನ ಗುರುತುಗಳು

ಗಾಜನೂರು, ಜೋಗ್ ಜಲಪಾತ, ಪಿಕ್‌ನಿಕ್‌ನ
ಹಳತಾದ ಸ್ನಾಪಿನಾಲ್ಬಮ್ಮುಗಳು
ಮುದಿಯಾದರೂ ಹದಿಗಟ್ಟದೇ ಇನ್ನೂ ಕುದಿಯುತ್ತಿರುವ
ಗೊಡ್ಡು ಬಿದ್ದರೂ ಶಡ್ಡು ಹೊಡೆಯುತ್ತಲೇ ಇರುವ
ನಮ್ಮ ನಮ್ಮ ಹಮ್ಮು–ಬಿಮ್ಮುಗಳು, ಅಹಮ್ಮುಗಳು.

ಕೆ. ಎಚ್. ಶ್ರೀನಿವಾಸ್

# ರಾಮು ಅಳುತ್ತಿದ್ದಾನೆ!

—ಡಾ|| ಹಿ. ಶಿ. ರಾಮಚಂದ್ರೇಗೌಡ

ದೇವರ ಬಗ್ಗೆ ಕನಿಕರ ಹುಟ್ಟುತ್ತಿದೆ. ಅವನನ್ನು ಯಾ ಅವಳನ್ನು ಇಷ್ಟು ಎಳೆದಾಡಿದ ಸಂದರ್ಭ ಇನ್ನೊಂದಿಲ್ಲ. ಭಾರತದಲ್ಲೇ ಹೀಗೆಂದು ತೋರುತ್ತದೆ. ಬೇರೆ ದೇಶಗಳಲ್ಲಾದರೆ ಮಾಡಲು ಬೇರೆ ಬೇರೆ ಕೆಲಸಗಳಿರುತ್ತವೆ. ನಮ್ಮವರು ಯಾವಾಗಲೂ ದೇವರ ಬಾಯಿಗೆ ಬೆರಳಿಟ್ಟುಕೊಂಡೇ ಇರುತ್ತಾರೆ! ಆ ಭಗವಾನ್ "ಯಾಡೇ ಗೌಡನಿಗೆ" ಅದನ್ನು ಉಗಿಯುವಂತಿಲ್ಲ ಬಿಡುವಂತಿಲ್ಲ. ನಮ್ಮ ಜಾತಿಬದ್ಧ ಸಮಾಜವೂ ಇದಕ್ಕೆ ಕಾರಣ. ಎಲ್ಲ ಜಾತಿಯವರಿಗೂ ಅವರವರದೇ ಧರ್ಮ, ದೇವರು ಇರುತ್ತಿದ್ದರೆ ಈ ಸಮಸ್ಯೆ ಬರುತ್ತಿರಲಿಲ್ಲ. ಭಾರತದಲ್ಲಿ ಇರುವುದು ಒಂದೇ ಜಾತಿ ಒಂದೇ ಧರ್ಮ, ಅದು "ಬ್ರಾಹ್ಮಣ್ಯ" ಈಗ ಇದು ಎರಡು ರೂಪದಲ್ಲಿದೆ. ಒಂದು, ಶುದ್ಧ ಜಾತಿ ಮತ್ತು ಅದರ ಧರ್ಮ. ಎರಡು, ಅಶುದ್ಧ ಜಾತಿ ಮತ್ತು ಬ್ರಾಹ್ಮಣ್ಯ. ಹುಟ್ಟು ಬ್ರಾಹ್ಮಣರು ಮೊದಲ ಗುಂಪಿಗೆ ಸೇರುತ್ತಾರೆ. ಈ ಸನಾತನತೆಯನ್ನು ಪಾಲಿಸಿದ ಪ್ರಜ್ಞಾವಂತ ಬ್ರಾಹ್ಮಣರು ಹೊರಗಿದ್ದಾರೆ. ಎರಡನೆಯ ಗುಂಪಿನವರು ಶೂದ್ರರು. ಇವರು ಹುಟ್ಟಿನಲ್ಲಿ ಶೂದ್ರರೆನಿಸಿಕೊಂಡರೂ ನಡವಳಿಕೆಯಲ್ಲಿ ಪೂರಾ ಹಾಗೂ ಪಕ್ಕಾ ಬ್ರಾಹ್ಮಣರು. ನಿಜ ಬ್ರಾಹ್ಮಣರನ್ನು ಅತ್ತ ಇತ್ತ ಅಲುಗಾಡಿಸಬಹುದು. ಈ ಮೂರ್ಖರನ್ನು ಮಾತ್ರ ಹರಿಹರ ಬ್ರಹ್ಮಾದಿಗಳು ಬಂದರೂ ಚಲಿಸಲಾಗುವುದಿಲ್ಲ. ಮೂಲ ಬ್ರಾಹ್ಮಣ್ಯದ ಶೋಷಣೆ ದಟ್ಟವಾಗಿರುವುದು ಇವರಲ್ಲಿಯೇ. ತಮ್ಮ ಜಾತಿಯ ಹೆಸರನ್ನು ಹೇಳಿಕೊಂಡು ಜಾತಿಯವರನ್ನು ಸುಲಿಗೆ ಮಾಡುತ್ತಾರೆ. ಹೀಗೆ ಮಾಡುವುದನ್ನೇ ನಾಯಕತ್ವ ಎಂದು ತಿಳಿದುಕೊಂಡಿದ್ದಾರೆ. ಆಯಾ ಜಾತಿಯ ಜನ ಕೂಡ ಹೀಗೆ ತಮ್ಮನ್ನೇ ಸುಲಿದು ದೊಡ್ಡವನಾದವನನ್ನು ತಮ್ಮ ಜಾತಿಯ ನಾಯಕ ಎಂದೇ ತಿಳಿದುಕೊಂಡಿದ್ದಾರೆ. ಇವರಿಗೆ ನಿಜವಾದ ಶತ್ರು ಬ್ರಾಹ್ಮಣ ಅಲ್ಲ. ತಮ್ಮ ಹತ್ತಿರವೇ ಇಟ್ಟುಕೊಂಡಿರುವ ತಮ್ಮವನೇ ಆದ ಈ ನಾಯಕ. ಈ ಜನ ಕೂಡ ಕಂಡೋ ಕಾಣದೆಯೋ ತಮ್ಮ ಈ ನಾಯಕನನ್ನು ಅನುಸರಿಸುವವರೇ ಆಗಿದ್ದಾರೆ. ಇವರು ತಮ್ಮ ಈ ವಿಷವರ್ತುಲದಿಂದ ಬಿಡುಗಡೆಯಾದರೆ ಭಾರತ ಬಿಡುಗಡೆಯಾದಂತೆ.

ಇವರ ಬಿಡುಗಡೆಗಾಗಿ ಭಾರತದಲ್ಲಿ ಏನೆಲ್ಲ ಚಳುವಳಿಗಳು ನಡೆದಿವೆ. ಅವೆಲ್ಲ ಬಾರೆ ಹೊಲಕ್ಕೆ ಮೋಟು ನೇಗಿಲು ಹಾಕಿ ಗೇಯ್ದಂತೆ ಆಗಿವೆ. ರಾತ್ರಿ ಇಡೀ ರಾಮಾ

---

ಡಾ|| ಹಿ. ಶಿ. ರಾಮಚಂದ್ರೇಗೌಡ, ರೀಡರ್: ಜಾನಪದ
ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು-570 006

ಯಣ ನೋಡಿ ರಾಮ–ಸೀತೆ ಸಂಬಂಧ ಏನು ಎಂದು ಕೇಳಿದಂತೆ ಆಗಿದೆ. ಹೀಗೆ ರಾಮ–ಸೀತೆ ಬಗ್ಗೆ ಏನೂ ಗೊತ್ತಿಲ್ಲದಿರುವುದರಿಂದಲೇ ಬೇರೆಯವರು ಇವರ ತಲೆ ಹಿಡಿದು ಮಾರಾಟ ಮಾಡುತ್ತಾರೆ. ಇವರನ್ನು ಬದಲಾಯಿಸಲೆಂದು ಹೊರಟ ವಿಚಾರವಂತರು ಹಠಮಾರಿ ಸೂಳೆಯ ಜೊತೆಗೆ ಹಾದರ ಮಾಡಲು ಹೋಗಿ ರಾತ್ರಿ ಕಳೆದವರಂತೆ ಸೋತು ತಣ್ಣಗಾಗುತ್ತಾರೆ.

ಆದುದರಿಂದಲೇ ಶೂದ್ರರು ತಮ್ಮ ನಾಶವನ್ನೇ ತಮ್ಮ ಅಭಿವೃದ್ಧಿ ಎಂದು ತಿಳಿದುಕೊಂಡವರು. ತಮಗೂ ಒಂದು ಜಾತಿಯಿದೆ, ಧರ್ಮ ಇದೆ ಎಂದು ತಿಳಿದು ಕೊಂಡುದೇ ಇದಕ್ಕೆ ಕಾರಣ. ಭಾರತದಲ್ಲಿ ಇರುವುದು ಒಂದೇ ಜಾತಿ, ಅದು ಬ್ರಾಹ್ಮಣ್ಯ. ಕ್ಷತ್ರಿಯ ಹಾಗೂ ವೈಶ್ಯ ಅದರ ಉಪಉತ್ಪತ್ತಿಗಳು. ಈ ಜಾತಿಯ ಆಡಳಿತಾತ್ಮಕ ಮತ್ತು ವ್ಯಾವಹಾರಿಕತೆಯನ್ನು ನೋಡಿಕೊಳ್ಳಲು ಅವು ಹುಟ್ಟಿಕೊಂಡವು. ಭಾರತದಲ್ಲಿ ಕ್ಷತ್ರಿಯ ಎಂಬುದು ಒಂದು ನಿರ್ದಿಷ್ಟ ಜಾತಿಯಲ್ಲ ಎಂಬುದನ್ನು ಅನೇಕ ವಿದ್ವಾಂಸರು ಸ್ಪಷ್ಟಪಡಿಸಿದ್ದಾರೆ. ಬಲವಿದ್ದವನು ರಾಜ್ಯ ವನ್ನು ಕಟ್ಟುತ್ತಿದ್ದ, ಅದರ ಸಮರ್ಥನೆಗಾಗಿ ಬ್ರಾಹ್ಮಣ ಪುರೋಹಿತನೊಬ್ಬನನ್ನು ಇಟ್ಟುಕೊಳ್ಳುತ್ತಿದ್ದ. ಕರ್ನಾಟಕದ ವಿಜಯನಗರದ ಉದ್ಭವವೇ ಇದಕ್ಕೆ ಉದಾ ಹರಣೆಯಾಗಿ ಸಾಕು. ಈ ರಾಜ "ರಾಜ ಜಾತಿಗೆ" ನಿಷ್ಠನಾಗಿ ನಡೆದುಕೊಂಡರೆ ಅವನಿಗೆ ಉಳಿಗಾಲ, ಇಲ್ಲದಿದ್ದರೆ ನಾಶ. ನಮ್ಮ ಚರಿತ್ರೆಯ ನಂದ ಗುಪ್ತರಾಜ ರಿಂದ ಹಿಡಿದು ಈ ಹೊತ್ತಿನ ಎ. ಪಿ. ಸಿಂಗರವರೆಗೆ ಈ ನಡವಳಿಕೆ ಮುಂದುವರಿದಿದೆ. ಇಡೀ ವೈಶ್ಯ ಸಮೂಹ ಈ "ರಾಜ ಜಾತಿಗೆ"ಗೆ ಊಳಿಗ ಮಾಡಲು ಹುಟ್ಟಿದ್ದು. ಈಗಲೂ ಈ ಜಾತಿ, ಅದರ ಧರ್ಮ ಮತ್ತು ಪಕ್ಷದೊಂದಿಗೆ ತನ್ನ ಹೆಂಡತಿಯ ಸಂಬಂಧವನ್ನು ಉಳಿಸಿಕೊಂಡು ಬಂದಿದೆ.

ಶೂದ್ರರು ವೃತ್ತಿಪರ ಗುಂಪುಗಳು. ಇವರಿಗೆ ಜಾತಿಯಾಗಲೀ ಧರ್ಮ ವಾಗಲೀ ಇಲ್ಲ. "ಹಂದಿ ಜೊತೆಗೆ ಆಡಿ ಕೆಂದುಗರು ಹೇಲುತಿಂತು" ಎಂಬ ಗಾದೆ ಯಂತೆ ಮೇಲಿನವರ ಜೊತೆಗೆ ಆಡಲು ಹೋಗಿ ಇವರು ಜಾತಿ ಕಲಿತುಕೊಂಡರು. ಇವರ ವೃತ್ತಿಯೇ ಇವರ ನಿಜವಾದ ಧರ್ಮ, ಭೂಮಿಪೂಜೆ, ಬೆಳೆಪೂಜೆ, ಮಳೆಪೂಜೆ ಮುಂತಾದ ಉತ್ಪತ್ಯಾತ್ಮಕ ಆಚರಣೆಗಳೇ ಇವರ ಧಾರ್ಮಿಕ ಚಟುವಟಿಕೆಗಳು. ಆದರೆ ಇವರಿಗೆ ವೃತ್ತಿ ಮತ್ತು ಧರ್ಮಕ್ಕೆ ಇರುವ ಸಂಬಂಧ ಗೊತ್ತಿಲ್ಲ. ಬ್ರಾಹ್ಮಣ್ಯ ಪೂಜಾವೃತ್ತಿಯಿಂದ ಹುಟ್ಟಿದ ಧರ್ಮ. ಆ ಧರ್ಮ ಅವರಿಗೇ ಸೇರಬೇಕು. ಉಳಿದ ವರಿಗೆ ಇದು ಅನ್ವಯಿಸತಕ್ಕುದಲ್ಲ. ಪರಿಸ್ಥಿತಿ ಏನೆಂದರೆ; ಈ ಶೂದ್ರರಿಗೆ ಊಟ ಕ್ಕಾಗಿ ತಮ್ಮ ವೃತ್ತಿಬೇಕು, ಅನುಸರಣೆಗೆ ಬೇರೆಯವರ ಧರ್ಮಬೇಕು. ಅಂದರೆ

ಇವರ ದೇಹ ಮತ್ತು ಮನಸ್ಸುಗಳು ಹೋಳಾಗಿ ಬಿಟ್ಟಿವೆ. ಭೀಮ ಸೀಳಿ ಹಾಕಿದ ಜರಾಸಂಧನ ರೀತಿ ಆಗಿ ಹೋಗಿದ್ದಾರೆ. ಹೀಗಿದ್ದೂ ಸಾವಿರ ಸಾರಿ ಹೇಳಿದರೂ ಇವರು ಸತ್ಯ ತಿಳಿದುಕೊಳ್ಳಲು ತವಕಿಸುವುದಿಲ್ಲ. ಹೀಗೆ ಮಿಥ್ಯೆಯನ್ನು ಸತ್ಯ ಎಂದು ನಂಬಿಹೊರಟವರನ್ನು ದಾರಿಗೆ ತರುವುದು ಕಷ್ಟ.

ಬ್ರಾಹ್ಮಣರ ಧರ್ಮ ಬ್ರಾಹ್ಮಣರಿಗಿರಲಿ. ನಿಮ್ಮ ಧರ್ಮ ನೀವು ಅನುಸರಿಸಿ ಎಂದರೆ ಶೂದ್ರರಿಗೆ ಅರ್ಥವಾಗುವುದಿಲ್ಲ. ವಿಶ್ವಾಮಿತ್ರನ ಕಾಲದಿಂದ ಇವತ್ತಿನ ಶೂದ್ರ ವಿಮರ್ಶಕರವರೆಗೆ ಬ್ರಾಹ್ಮಣರ ಮುಂದೆ 'ತಾಳ ಮೇಳ ಕಟ್ಟಿ' ಅವರಿಂದ ಶಹಬಾಷ್‌ಗಿರಿ ಪಡೆಯಲು ನಿಂತಿದ್ದಾರೆ. ಕೆಲತಿಂಗಳು ಹಿಂದೆಯಷ್ಟೆ ಈ ಪ್ರವೃತ್ತಿಯನ್ನು ಪಾಮೆ ಆಚಾರ್ಯ ಅವರು ಹೀಗಳೆದಿರುವ ಪ್ರಜಾವಾಣಿಯ 'ನಾಲ್ಕೂ ನಿಟ್ಟಿನಿಂದ' ವಿಭಾಗದಲ್ಲಿ ಪ್ರಕಟವಾಗಿದೆ. ಆದ್ದರಿಂದ ಇದು ಧರ್ಮವಾಗಲಾರದು; ಕೇವಲ ಅವಕಾಶಗಳ ವಿಸ್ತರಣೆ. ಕಾರಣವಾಗಿ ತಮ್ಮ ಧರ್ಮದಿಂದ ಇತರರು ಅನುಕೂಲ ಪಡೆಯುವ ಬಗ್ಗೆ ಬ್ರಾಹ್ಮಣರು ಸಿಟ್ಟುಗೊಳ್ಳುವುದು ಸಹಜವೇ ಆಗಿದೆ. ಈ ಇಬ್ಬರ ಧರ್ಮವೂ ಬೇರೆ ಬೇರೆ ಆಗಿರುತ್ತಿದ್ದರೆ ಇಬ್ಬರಿಗೂ ಅನುಕೂಲವೇ ಆಗಿರುತ್ತಿತ್ತು. ತಾವು ಧರ್ಮ ಸಂಸ್ಥಾಪಕರು ಎಂಬ ಸನಾತನಿ ಬ್ರಾಹ್ಮಣರ ಅಹಂಕಾರ ಹೋಗಿರುತ್ತಿತ್ತು. ಅವರೂ ಪ್ರಗತಿಗೆ ತಮ್ಮ ಮೈಯನ್ನು ಒಡ್ಡಿಕೊಳ್ಳಲು ಸಹಾಯವಾಗುತ್ತಿತ್ತು. ಧರ್ಮ, ನೀತಿ, ರಾಜಕೀಯ, ಸಂಸ್ಕೃತಿ ಮತ್ತು ಆರ್ಥಿಕ ಅವಕಾಶಗಳನ್ನೆಲ್ಲ ತಮ್ಮ ಮೂಲಕ ಹರಿಯ ಬಿಡುವ ಅಥವಾ ವಿತರಿಸುವ ವ್ಯವಸ್ಥೆಯನ್ನು ಸಹಜವಾಗಿಯೇ ಬ್ರಾಹ್ಮಣರು ಕೈಬಿಡುತ್ತಿದ್ದರು.

ಈ ಬಗೆಯ "ಪ್ರೀತಿಯ ಗುಲಾಮ"ರಿಂದಲೇ ಬ್ರಾಹ್ಮಣ ಸಮಾಜ ಕೂಡ ಹಿಂದೆ ಸರಿಯುತ್ತಿದೆ. ತಾವು ಬೇಡವೆಂದು ಬಿಟ್ಟಿದ್ದನ್ನು ಇವರು ಅನುಸರಿಸಲು ಒತ್ತಾಯ, ಪ್ರೇರಣೆ ಹಾಗೂ ಸೌಲಭ್ಯಗಳನ್ನು ಕೊಡುತ್ತಿರುವುದರಿಂದ ಹಳೆಯ ಜಾಡ್ಯಗಳಿಗೆ ಜೋತು ಬೀಳುವಂತಾಗಿದೆ. ಈಗ ಪ್ರಜ್ಞಾವಂತ ಬ್ರಾಹ್ಮಣರು ಸಂಬಂಧಗಳನ್ನು ಬದಲು ಮಾಡಿಕೊಳ್ಳುತ್ತಿರುವಂತೆ ಇತರರೂ ಮುಂದುವರಿಯಲು ಸಾಧ್ಯವಿತ್ತು. ಮೂಲ ಬ್ರಾಹ್ಮಣ್ಯ ತತ್ವ ಇರುವುದೇ ಇಂಥ ಬ್ರಾಹ್ಮಣರಲ್ಲಿ. ಬ್ರಾಹ್ಮಣ್ಯ ಜಾತಿಯಲ್ಲಿಲ್ಲ, ಅವಕಾಶದಲ್ಲಿದೆ. ಈ ಅವಕಾಶ ಇಂಡಿಯಾದಲ್ಲಿ ಇದ್ದರೆ ಅದು ಸರಿ, ಇಲ್ಲದಿದ್ದರೆ ಅಮೇರಿಕ ಸರಿ. ಸ್ಥಳ ಬದಲಾಯಿಸದಿರುವಿಕೆ ಶೂದ್ರರ ಸಾಂಸ್ಕೃತಿಕ ಗುಣವಾದರೆ ಸ್ಥಳ ಮತ್ತು ಅವಕಾಶಗಳ ಬದಲಾವಣೆಯೇ ಬ್ರಾಹ್ಮಣ್ಯದ ಮೂಲ ತತ್ವವಾಗಿದೆ. ಇದು ಸಾಮಾಜಿಕ–ಸಾಂಸ್ಕೃತಿಕ ಬೆಳವಣಿಗೆಯ ಗುಣ ಕೂಡ. ಹೀಗೆ ಕಾಲ–ದೇಶಕ್ಕೆ ಅನುಗುಣವಾಗಿ ಬ್ರಾಹ್ಮಣ್ಯ ಸಂಬಂಧಗಳನ್ನು ಬದಲಾಯಿಸಿ

ಕೊಳ್ಳುತ್ತಾ ಹೋಗುತ್ತದೆ. ಆದರೆ ಶೂದ್ರ ವರ್ಗದ ಮಧ್ಯಮ ಜಾತಿಯ ಕೆಲವು ಜನ ಕೆಳಗಿನ ಜಾತಿಗಳ ಕೂಡ ಸಂಬಂಧ ಬದಲಾಯಿಸಿಕೊಳ್ಳದಷ್ಟು ಕಠೋರಕರ್ಮಠರಾಗಿದ್ದಾರೆ. ಒಬ್ಬ ದಲಿತ ಬ್ರಾಹ್ಮಣ ಹೆಣ್ಣೊಂದನ್ನು ಪ್ರೀತಿಸಿ ಮದುವೆಯಾಗಿ ಬದುಕಬಹುದು. ಲಿಂಗಾಯಿತ, ಒಕ್ಕಲಿಗ ಅಥವಾ ಕುರುಬರಂಥ ಜಾತಿಯ ಹೆಣ್ಣುಗಳನ್ನು ಪ್ರೀತಿಸಿ ಬಚಾವಾಗುವುದು ಕಷ್ಟ.

ತಮ್ಮ ಧರ್ಮವನ್ನು ಮಾರಿ ದೇಹವನ್ನು ಮಾತ್ರ ಇಟ್ಟುಕೊಂಡಿರುವುದರಿಂದಲೇ ಬಿ.ಜೆ.ಪಿ., ಆರ್.ಎಸ್.ಎಸ್.ಗಳು ರಾಮನ ಬಗ್ಗೆ ಮಾತಾಡಿದರೆ ಇವರು ಮೈಮೇಲೆ ಬಂದು ಕುಣಿಯುತ್ತಾರೆ, ಹೊಡೆಯುತ್ತಾರೆ ಮತ್ತು ಸಾಯುತ್ತಾರೆ. ಹಿಂದೂ ಪರಿಷತ್ತಿನವರಿಗೆ ನಿಜವಾದ ಧರ್ಮವೆಂಬುದೂ ಗೊತ್ತಿಲ್ಲ, ಬ್ರಾಹ್ಮಣ್ಯದ ಬಗ್ಗೆಯೂ ಗೊತ್ತಿಲ್ಲ. ಬ್ರಾಹ್ಮಣ್ಯದ ಒಂದು ಪ್ರಾಕೃತ ರೂಪದಂತೆ ಕಂಡುಬರುತ್ತಾರೆ. ನಿಜವಾದ ಬ್ರಾಹ್ಮಣರು ತಲೆತಗ್ಗಿಸುವಂತೆ ನಡೆದುಕೊಳ್ಳುತ್ತಾರೆ. ಈಗ ಒಂದೊಂದು ಜಾತಿ ಒಂದೊಂದು ಸಾಂಸ್ಕೃತಿಕ ಗುರುತು (cultural identity) ಅಷ್ಟೆ. ಒಂದಕ್ಕೆ ಒಂದು ಪಾಳೇಗಾರನೂ ಅಲ್ಲ, ಪುರೋಹಿತನೂ ಅಲ್ಲ. ಧರ್ಮವನ್ನು ಒಂದು ವೈಯಕ್ತಿಕ ಮತವಾಗಿ ಅಥವಾ ವೃತ್ತಿಯಾಗಿ ಇಟ್ಟುಕೊಂಡು, ಸಾರ್ವಜನಿಕ ಬದುಕನ್ನು ಪರಿಸ್ಥಿತಿಯಾಗಿ ಬಳಸಿಕೊಂಡು ಬದುಕುವವನು ಮನುಷ್ಯ. ಹಿಂದಿನ ಪುರೋಹಿತಿಕೆಯಷ್ಟೇ ಈಗಿನ ಕಾರ್ಮಿಕ ವೃತ್ತಿ ಗೌರವಯುತವಾದುದು. ಈ ಎರಡರ ಮಧ್ಯ ಯಾವುದು ಶ್ರೇಷ್ಠ ಯಾವುದು ಕನಿಷ್ಠ ಎಂಬ ಪ್ರಶ್ನೆ ಬರುವುದಿಲ್ಲ. ಒಬ್ಬ ಜಾಡಮಾಲಿ ಕೆಲಸ ಐ.ಎ.ಎಸ್. ಅಧಿಕಾರಕ್ಕೆ ಸಮ; ಗೌರವದ ದೃಷ್ಟಿಯಿಂದ ಜಾಡಮಾಲಿಯೇ ಶ್ರೇಷ್ಠ. ಯಾಕೆಂದರೆ ಅವನು ಒಂದು ಸಮಾಜದ ಮೂಲಹಂತದ ರಚನಾತ್ಮಕ ಘಟಕ. ಪರಿಸ್ಥಿತಿ ಹೀಗಿರುತ್ತ ಈ ಬಿ.ಜೆ.ಪಿ., ಹಿಂದೂ ಪರಿಷತ್‌ನವರು ಸಾಮಾನ್ಯ ಜನರನ್ನು ತಪ್ಪು ದಾರಿಗೆ ಎಳೆಯುತ್ತಿದ್ದಾರೆ. ದೇವರು, ಧರ್ಮವನ್ನು ಎಂಟಾಣೆಗೆ ಬೀದಿಯಲ್ಲಿ ಹರಾಜು ಹಾಕುತ್ತಿದ್ದಾರೆ, ಇವರನ್ನು ಜನ ಬ್ರಾಹ್ಮಣರೆಂದು, ಧರ್ಮಜ್ಞರೆಂದು ತಿಳಿದುಕೊಳ್ಳಬಾರದು. ಬ್ರಾಹ್ಮಣರನ್ನೇ ಸ್ವತಃ ನಾಶ ಮಾಡಲು ಹೊರಟಿರುವ ಭಸ್ಮಾಸುರರೆಂದು ಬರೆದಿಟ್ಟುಕೊಳ್ಳಬೇಕು.

ರಾಮನ ರಾಜ್ಯದಲ್ಲಿ ಶೂದ್ರನಾದ ಶಂಬೂಕ ತಪಸ್ಸು ಮಾಡಿದ್ದರಿಂದ ಬ್ರಾಹ್ಮಣ ಹುಡುಗ ಸತ್ತ ಎಂದು ಮೂಲ ರಾಮಾಯಣ ಹೇಳುತ್ತದೆ. ಮುಸ್ಲಿಂರ ಮಸೀದಿ ಉಳಿಸಲು ಹೋಗಿ ವಿ.ಪಿ. ಸಿಂಗ್ ಎತ್ತಂಗಡಿಯಾದ ಎಂದು ಇವತ್ತಿನ ರಾಮಾಯಣ ಹೇಳುತ್ತದೆ. ರಾಮ ಮತ್ತು ರಾಮಾಯಣ ಹೀಗೆ ಹೇಳುತ್ತಾ ಹೋದರೆ ಅದರ ಗತಿ ಏನಾಗುತ್ತದೆ ಗೊತ್ತೆ ? ಈ ಹಿಂಸೆಯನ್ನು ತಪ್ಪಿಸಲೆಂದೇ ಕುವೆಂಪು ಅಂಥವರು ರಾಮಾಯಣ ದರ್ಶನವನ್ನು ಸೃಷ್ಟಿಸಿದ್ದು, ರಾಮ ಮತ್ತು ರಾಮಾಯಣವನ್ನು ಪುನರ್

ಸೃಷ್ಟಿಸಿದ್ದು. ಈ ಕಾರಣಕ್ಕಾದರೂ ಹಿಂದೂವಾದಿಗಳು ಕುವೆಂಪು ಪದತಲದಲ್ಲಿ ಬಿದ್ದು ಒದ್ದಾಡಬೇಕು. ಕುವೆಂಪು ಹಾಗೆ ಮಾಡದೆ ಮೂಲ ರಾಮ ಮತ್ತು ರಾವಣಾಯಣವನ್ನು ಹಾಗೆಯೇ ಇವತ್ತಿನ ಜನಗಳ ಮುಂದೆ ಪ್ರಸ್ತುತ ಪಡಿಸಿದ್ದರೆ ಬ್ರಾಹ್ಮಣರ ತಲೆಗಳು ಉದುರುತ್ತಿದ್ದವು. ಅನೇಕ ಶೂದ್ರರು ಹೀಗೆ ಬ್ರಾಹ್ಮಣ್ಯವನ್ನು ಶಮನ ಮಾಡುವ ಮೂಲಕ ಈ ದೇಶದ ಜನ ದಿನದಲ್ಲಿ ಕೆಲವು ಗಂಟೆಗಳಾದರೂ ನಿದ್ದೆ ಮಾಡುವಂತಾಗಿದೆ. ಹಿಂದೂವಾದಿಗಳೇ ಮತ್ತೆ ರಾಮಾಯಣ ಬರೆದಿದ್ದರೆ; ಈಗ ಅಯೋಧ್ಯೆಯ ಹಣೆಯ ಮೇಲೆ ಬರೆಯ ಹೊರಟಿರುವಂತೆ ಹೊರಟರೆ ಭಾರತ ಪ್ರಪಂಚದ ಒಂದು ದೊಡ್ಡ ಸ್ಮಶಾನ ಎಂದು ಗಿನ್ನಿಸ್ ದಾಖಲೆಗೆ ಸೇರುತ್ತದೆ, ನೆನಪಿರಲಿ.

ಈಗ ನಡೆಯುತ್ತಿರುವುದು ಧರ್ಮಯುದ್ಧವಲ್ಲ: ಅಧರ್ಮ ಯುದ್ಧ. ಮುಸ್ಲಿಂರನ್ನು ದೇಶ ಬಿಟ್ಟು ಓಡಿಸುವುದಾದರೆ ನಂತರದ ಸರದಿ ಯಾರಿಗೆ ಬರುತ್ತದೆ? ಒಬ್ಬರಿಗೆ ಮೀಸಲಾತಿ ಕೊಟ್ಟಾಗ ನಮ್ಮನ್ನು ಮೀಸಲಾತಿ ಪಟ್ಟಿಗೆ ಸೇರಿಸಿ ಎಂದು ಇನ್ನೊಂದು ವರ್ಗ ಒತ್ತಾಯಿಸುವಂತೆ ಅವರನ್ನು ಕಳಿಸಿ, ನಂತರ ಇವರನ್ನು ಕಳಿಸಿ ಎಂದು ಪಟ್ಟಿಗಳು ತಯಾರಾಗುತ್ತಲೇ ಹೋಗುತ್ತವೆ. ಸಮಸ್ಯೆ : "ತೀಟೆ ಹೆಂಗಸನ್ನು ಕೆಣಕಿ ತ............ ಎಲ್ಲಾ ಗಾಯ ಮಾಡಿಕೊಂಡ" ಎಂಬಂತಾಗುತ್ತದೆ. ಬಿ.ಜೆ.ಪಿ. ಯಾರು? ಅದು ರಾಮನನ್ನು ತನ್ನ ಪಕ್ಷಕ್ಕೆ ಏಕೆ ಸೇರಿಸಿಕೊಳ್ಳುತ್ತಿದೆ? ಬೇರೆ ಪಕ್ಷಕ್ಕೆ ಇಲ್ಲದ ರಾಮ ಈ ಪಕ್ಷಕ್ಕೆ ಏಕೆ? ಇಡೀ ರಾಮ-ರಾಮಾಯಣ ಜನರ ಪ್ರೀತಿಯಾಗದೆ ಓಟಾಗಿ ಪರಿವರ್ತಿತವಾಗುವ ಗಂಡಾಂತರ ಯಾಕೆ ಬಂದಿದೆ ಎಂದು ಜನಗಳಿಗೆ ಅರ್ಥವಾಗಿದೆ! "ಪತಿಗಳೆನ್ನನು ಮಾರಿ ಧರ್ಮಸ್ಥಿತಿಯ ಕೊಂಡರು" ಎಂದು ಕುಮಾರ ವ್ಯಾಸ ಭಾರತದ ದ್ರೌಪದಿ, ದುಶ್ಯಾಸನ ತನ್ನ ವಸ್ತ್ರಾಪಹರಣ ಮಾಡುವಾಗ ಪರಿತಪಿಸುತ್ತಾಳೆ. ಈಗ 'ನನ್ನ ಧರ್ಮವನ್ನೇ ಮಾರಿ ಓಟು ಕೊಳ್ಳುವಳಲ್ಲೋ ಈ ರಾಜಕೀಯದ ಸೂಳೆ' ಎಂದು ರಾಮ ಅಳುತ್ತಿದ್ದಾನೆ. ●

## ಯೋಗ ಯೋಗಿನಿ ಸೊಲ್ಲು

ಚಿಕ್ಕವಳ ಗುಟ್ಟೆ
ದೊಡ್ಡವಳ ಗುಟ್ಟಿಗು ನಡುವೆ
ಕಲ್ಲು ಹೊಳೆ ಕೆನ್ನೆಯಲಿ
ಹಳ್ಳ ಗುಣಿಯು

ವೀ. ಚಿಕ್ಕವೀರಯ್ಯ, ಚಿಕ್ಕವೀರಯ್ಯನಪಾಳ್ಯ, ತುಮಕೂರು

ಜಾವ ಜಾವಗಳೊಳಗೆ
ದೇವಗನ್ನಿಕೆ ಸುಳಿದು
ಪಂಚದೊಣೆಗಳ ವಿರಹ ಉಕ್ಕಿ ಹರಿದು

ಉತ್ತರಕೆ ಸೂರ್ಯ ಗವಿ
ಮಂತ್ರವಾದಿಯ ವಾಸ
ಬೆಳಕ ಮೊಳಕೆಗಳೆದ್ದು ಬರುವ ತಾರೆ

ಹಗಲ ಹಣೆಗಣ್ಬೆಂಕಿ
ಬೇಯಿಸುತ್ತಿರುವಾಗ
ತಟಗುಡುವುದೊಳಗೆ
ತಣ್ಣೀರ ಚಿಲುಮೆ

ಬಳಲಂದನಿಯಲ್ಲಿ
ಕೊಳಲುಲಿಯು ಕೇಳಿಸದಾಯ್ತು
ಒಳ ಹೊರಗೆ ಗುದ್ದುಗೆಗಳಲ್ಲಿ
ಮೌನ.

ಪಡುವಲಿಗೆ ಸುಡುಗಾಡ
ಬಯಲು
ಕುರಂಗ ರಾಯನ
ಅರಮನೆಯ ಅಂಗಣ
ಕುಸಿದ ಕೋಟೆ.

ಬೆಟ್ಟಕ್ಕೆ ಬಾಲವನು
ಸುತ್ತಿ
ಕಾಯುತ್ತಿರುವ
ದೊಡ್ಡಕಾಯಂದ ನಮ್ಮ
ಅಣ್ಣಯ್ಯನು.

ಕಾಯುದ್ದಿ ಕುಳಿತೇ ಇದ್ದ
ನವಕೋಟಿ ಸಿದ್ಧರು

ಭೋಗದಂಡವ ಹಿಡಿದು
ನಡೆದರೆತ್ತ ?
ಯಾವ ಲೋಕವ ಗೆದ್ದು ತರುವರೇನನ್ನು ?

ಅಲ್ಲಿಂದ ಹಿಂದಕ್ಕೆ
ಮತ್ತೆ ಮಾಯಾ ಲೋಕ
ಅಳವಿಗೂ ಮೀರಿದ ಅಲ್ಲಂಡೆಯು.

ಸೀಳು ಬಂಡೆಯು ಆಚೆ
ನಿಂಬೆ ರಘುರಿಯು ಈಚೆ
ಅಚ್ಚುಂಡೆ ಆಟದ ಮುಂಜಾಗರ.

ತೂಗಿತ್ತು ನಾಗರ
ತೂಗಿತ್ತು ಸಾಗರ
ಯೋಗ ನಿದ್ರೆಯ ಯೋಗಿ ಸರೋವರ.

ಕತ್ತರಿಸಿ ತುಂಡಾಗಿ
ಒಲೆ ಮೇಲೆ ಕುದಿಯುವ ಜೀವ
ಸಂಜೀವಿನೀ ಕಡ್ಡಿ ಸೋಂಕಿ
ಸತ್ತುದು ಬದುಕಿ
ನೆಲದ ಗರುಕೆಯುರಿಸಿ
ನೆಗೆವ ಚಿತ್ತ.

ಬೆಟ್ಟ ಮರಿಬೆಟ್ಟ
ನೀರ ಒಳಗಟ್ಟೆ
ಫಳಫಳ ಗುಟ್ಟು
ತೆಕ್ಕೆಮುರಿ ಬಿದ್ದ ಕತ್ತಲೆಯು ಬೆಳಕು

ಬಗೆ ಬಗೆಯ ಬನಕಣಿವೆ
ನಿತ್ಯನಗೆ
ದಿನದಿನ ದುಃಖ

ಅಚ್ಚ ಬಿಳಿ
ಮುಚ್ಚಿದ ಕಪ್ಪು
ಹೂವು ಹೂವಿಗೆ ವಾಸಸೆಯು ಧ್ಯಾನವು !

ಅದರಾಸೆ ಜೀವಕೆ
ಏಕೆ ಬಡಿವುದೊ ಕಾಣೆ
ಸೃಷ್ಟಿಗೆ ಸೃಷ್ಟಿಯೆ
ಎದುರು ಬದುರು.

ಉದ್ದ ಮುಳುಗಾ ಇಲ್ಲಿ
ಹುಟ್ಟುಸಾವಿನ ನಡುವೆ
ಕಟ್ಟು ಬಿಚ್ಚುವ ಒಲವು
ಅರೆಗಣ್ಣ ಮರೆಯಲ್ಲಿ
ಅತೃಪ್ತಿಯು.

ಉಭಯ ಕುಶಲೋಪರಿಯ
ಅಭಯುವನು ಚಿಗುರಿಸುವ
ಯೋಗ ಯೋಗಿನಿ ಸೊಲ್ಲು
ಉಲ್ಲಸಿತ ಸೊಪ್ಪೆಲ್ಲ ಧನ್ವಂತರಿ !

ಇದನೆಚ್ಚಿ
ಕ್ರೌರ್ಯವನು
ದೈನ್ಯವನು
ಸಹಿಸುತ್ತ ಕೊರಗಿರುವ
ಪಿಸುಮಾತುಗಳ ಸನ್ನೆ
ಏಕಾಂಗಿ ಶೋಕ ಸಂತಪ್ತ ಧರಣಿ !

— ವೀಚಿ.



# ಕನಸಿಗೊಂದು ಕಣ್ಣು

## "ಜೀವನವೆಂದರೆ ಉಪದೇಶವಲ್ಲ, ನೋಡುವುದು"

ಬಿ.ಸಿ. ದೇಸಾಯಿಯವರು ಇತ್ತೀಚಿನ ವರ್ಷಗಳಲ್ಲಿ ಪ್ರಜ್ಞಾವಂತ ಸಾಹಿತ್ಯಾಸಕ್ತರ ಗಮನವನ್ನು ಸೆಳೆದವರು. ತುಂಬ ಸಂಕೋಚ ಸ್ವಭಾವದ ವ್ಯಕ್ತಿ. ಪ್ರತಿಯೊಂದಕ್ಕೂ ಹುಡುಗಿಯಂತೆ ನಾಚಿಕೊಂಡು ಆಳವಾಗಿ ಯೋಚಿಸುತ್ತಿದ್ದವರು. ಆದರೆ ಅವರು ಬದುಕನ್ನು ನೋಡುತ್ತಿದ್ದ ಕ್ರಮವೇ ವಿಚಿತ್ರವಾಗಿತ್ತು. ಜಗತ್ತಿನ ಅತ್ಯುತ್ತಮ ಸಾಹಿತ್ಯವನ್ನೆಲ್ಲ ಓದಿಕೊಂಡು ನಮ್ಮ ಸಾಹಿತ್ಯ ವಿಮರ್ಶೆಯಲ್ಲಿಯ ದೋಷಗಳ ಬಗ್ಗೆ ಅರ್ಥವಂತಿಕೆಯಿಂದ ವ್ಯಾಖ್ಯಾನಿಸುತ್ತಿದ್ದರು. ಮೇಲ್ನೋಟಕ್ಕೆ ಒಬ್ಬ ಕುಡುಕ ಮತ್ತು ಹುಚ್ಚ ಎಂದು ತೀರ್ಮಾನಿಸುವ ಮಟ್ಟಿಗೆ ಇದ್ದರು.

ಒಮ್ಮೆ ಎಂ.ಬಿ. ಸಿಂಗ್‌ರವರು ಸಿಕ್ಕಿದ್ದರು. ಆಗ ಸಿಂಗ್ ಅವರು ಶೂದ್ರದಲ್ಲಿ ಪ್ರಕಟವಾದ 'ಬಲತ್ಕಾರ' ಕಥೆಯನ್ನು ಓದಿ "ಶೂದ್ರ, ಇಡೀ ವರ್ಷ ನಾವು ಪ್ರಯತ್ನ ಪಟ್ಟರೂ ಇಂಥ ಒಳ್ಳೆಯ ಕಥೆಯನ್ನು ಪಡೆಯುವುದಿಲ್ಲ." ಎಂದರು. ಆಗ ಅವರು 'ಸುಧಾ'ದ ಸಂಪಾದಕರಾಗಿದ್ದರು. ಸ್ವಾರಸ್ಯಕ್ಕಾಗಿ ಇಲ್ಲಿ ಒಂದು ಮಾತನ್ನು ಸೇರಿಸುವುದು ಸೂಕ್ತ ಅನ್ನಿಸುತ್ತದೆ. ಎರಡು ಮೂರು ವರ್ಷಗಳ ಹಿಂದೆ ಶೂದ್ರದಲ್ಲಿ ಪ್ರಕಟವಾದ ಒಂದು ಕಥೆಯನ್ನು ಓದಿ "ಕಥೆ ಚೆನ್ನಾಗಿದೆ, ಅವರ ವಿಳಾಸ ಕೊಡು" ಎಂದರು. ಆಗ "ನಿಮ್ಮ ಪ್ರಜಾವಾಣಿ ಪತ್ರಿಕೆಯಿಂದ ವಾಪಸ್ಸು ಬಂದ ಕಥೆ" ಎಂದೆ. ಆ ಲೇಖಕರ ಹೆಸರು ಇಲ್ಲಿ ಬೇಡ.

ಮೂರು ನಾಲ್ಕು ತಿಂಗಳ ಹಿಂದೆ ದೇಸಾಯಿ ಅವರಿಂದ ಒಂದು ಪತ್ರ ಬಂತು. ಒಂದೇ ಒಂದು ಸಾಲಿನ ಪತ್ರ. ಆದರಲ್ಲಿ "ಶೂದ್ರ, ನನ್ನ ಪತ್ನಿ ಸ್ವರ್ಗಸ್ಥಳಾದಳು" ಎಂದು ಬರೆದಿತ್ತು, ಆ ಪತ್ರಕ್ಕೆ ಉತ್ತರ ಬರೆಯಲಾಗಲಿಲ್ಲ. ಒಂದು ಕಾಲಕ್ಕೆ ಪತ್ರ ಬರೆದರೆ ಉತ್ತರಿಸುವುದಿಲ್ಲವೆಂದು ಸಿಟ್ಟುಗೊಂಡು ಪತ್ರ ಬರೆಯುವುದನ್ನೇ ನಿಲ್ಲಿಸಿದ್ದೆ. ಆದರೆ ಆಮೇಲೆ ತಪ್ಪು ಅನ್ನಿಸಿತು. ಯಾಕೆಂದರೆ ದೇಸಾಯಿಯವರ ವ್ಯಕ್ತಿತ್ವವೇ ಅಂಥದ್ದಾಗಿರುವುದರಿಂದ ಹೆಚ್ಚು ಬಯಸಬಾರದು ಎಂದು. ಆತ ಮಾತಾಡಿದ್ದನ್ನೆಲ್ಲ ಬರೆದಿದ್ದರೆ; ಎಂಬ ಪ್ರಶ್ನೆಯನ್ನು ಮುಂದಿಟ್ಟುಕೊಂಡೆ ಯೋಚಿಸುತ್ತಿದ್ದೆ. ಆದರೆ ಯಾಕೆ ಬರೆಯಬೇಕು ? ಅದರಿಂದ ಏನು ಸಾಧಿಸುತ್ತೇವೆ ? ಎಂಬ ಪ್ರಶ್ನೆಗಳು

ದೇಸಾಯಿ ಅವರಿಗೆ ಗಾಢವಾಗಿ ಕಾಡುತ್ತಿತ್ತು. ನಾನು ನನ್ನ ಸಂತೋಷಕ್ಕಾಗಿ ಬದುಕುತ್ತೇನೆ; ಅದರ ಮಧ್ಯೆ ಬರೆಯುವುದು, ಓದುವುದು ಮತ್ತು ಅಲೆಯುವುದು ಪ್ರಿಯವಾದದ್ದು, ಅದನ್ನೇ ಒಂದು ಶಿಸ್ತನ್ನಾಗಿ ರೂಢಿಸಿಕೊಳ್ಳಲಾರೆ ಎಂದು ಹೇಳಿದ ಮಾತಿಗೆ ವಿಸ್ಮಯಗೊಂಡಿದ್ದೆ. ನಂತರ ಅನ್ನಿಸಿತು: ಈ ಮನುಷ್ಯ ಕುಡಿತಕ್ಕೆ ಪೂರ್ಣ ಬಲಿಯಾಗಿದ್ದಾನೆ. ಆದ್ದರಿಂದಲೇ ಸೃಷ್ಟಿಕ್ರಿಯೆಯ ಬಗ್ಗೆ ಉತ್ಸಾಹ ಕಳೆದುಕೊಂಡಿದ್ದಾನೆ. ದೇಸಾಯಿಯವರಿಗೆ ಈ ಮಾತನ್ನು ಹೇಳಿದ್ದರೂ ಆತ ಸಿಟ್ಟಿಗೇಳುತ್ತಿರಲಿಲ್ಲ. ಅತ್ಯಂತ ಸೌಮ್ಯ ಸ್ವಭಾವದ ವ್ಯಕ್ತಿ. ಒಮ್ಮೆ ಕುಡಿದು ಶಕ್ತಿಹೀನನಾಗಿದ್ದಾಗ "ಶೂದ್ರ" ಜೀವನವೆಂದರೆ ಉಪದೇಶಿಸುವುದಲ್ಲ; ನೋಡುವುದು" ಎಂದಾಗ ಚಕಿತನಾಗಿದ್ದೆ. ಈ ದೃಷ್ಟಿಯಿಂದ ದೇಸಾಯಿಯವರ ಪತ್ನಿಯೂ ಸಹ ತನ್ನ ಗಂಡನನ್ನು ನೋಡುತ್ತಲೇ ಬಂದರು. ಆಕೆ ಪ್ರತಿಭಟಿಸಲೇ ಇಲ್ಲ ಅನ್ನಿಸುತ್ತದೆ. ಈ ಅಂತರ್ಮುಖಿ ವ್ಯಕ್ತಿಯನ್ನು ಹೇಗೆ ತಿದ್ದುವುದು ಎಂಬ ಮಾನಸಿಕ ಹೋರಾಟದಲ್ಲಿಯೇ ಕಳೆದಿರಬಹುದು. ದೇಸಾಯಿಯವರ ಪತ್ನಿಯನ್ನು ಎಂದೂ ನೋಡಿದವನಲ್ಲ. ಆದರೆ ಒಮ್ಮೆ ನೋಡುವ ಸಂದರ್ಭ ಸಿಕ್ಕಿತು. ಎರಡು ವರ್ಷಗಳ ಹಿಂದೆ ಸಾಹಿತ್ಯ ಅಕಾಡೆಮಿಯ ವಿಶೇಷ ಸಭೆ ಬೆಳಗಾಂನಲ್ಲಿತ್ತು. ಸಭೆಯನ್ನು ಮುಗಿಸಿಕೊಂಡು ಕಥೆಗಾರ ಮತ್ತು ರೈತ ಹೋರಾಟಗಾರ ಕುಂದರನಾಡ ಪಾಟೀಲರೊಡನೆ ದೇಸಾಯಿಯವರನ್ನು ನೋಡಲು ಹೋದೆ. ಆಗಲೇ ಸಂಜೆ ಆರೂವರೆಯಾಗಿತ್ತು. ಬೆಳಗಾಂ ಸುಂದರ ಹವೆಯಿಂದ "ಹಾಯ್" ಅನ್ನಿಸುತ್ತಿತ್ತು. ನಗರದ ಹೊರವಲಯದಲ್ಲಿ ದೇಸಾಯಿಯವರ ಮನೆಯಿದ್ದದ್ದು. ಆದರೆ ನಾವು ಹೋದಾಗ ಅವರು ಇರಲಿಲ್ಲ. ಸಾಲಹಳ್ಳಿಗೆ ಹೋಗಿದ್ದರು. ಅವರ ಜಮೀನು ಇದ್ದದ್ದೆಲ್ಲ ಅಲ್ಲಿಯೇ. ನಿರುತ್ಸಾಹದಿಂದ ವಾಪಸ್ಸಾಗಿ ಮಾರನೆಯ ದಿನ ಬೆಳಗ್ಗೆ ಕುಂದರನಾಡ ಪಾಟೀಲರೊಡನೆ ಹೋದೆ. ಅದೊಂದು ಆಕರ್ಷಣೆಯಿಲ್ಲದ ಮನೆ. ದೇಸಾಯಿಯವರ ರೀತಿಯಲ್ಲಿ ನಿರಾಡಂಬರವಾಗಿತ್ತು. ಹೊಸ್ತಿಲನ್ನು ತುಳಿದು ಒಳಕ್ಕೆ ಹೋದೆ. ರಾಶಿರಾಶಿ ಪುಸ್ತಕಗಳು ಮೂಲೆಯಲ್ಲಿ ಬಿದ್ದಿದ್ದವು. ಅವು ಕಸಕ್ಕಿಂತ ಕಡೆಯಾಗಿ ಬಿದ್ದಿದ್ದವು. ಅಲ್ಲಿಯೇ ಗೋಡೆಯ ಮೇಲೆ ಜೀನ್‌ಪಾಲ್ ಸಾರ್ತ್ರೆಯ ಭಾವಚಿತ್ರ ಪಳೆಯುಳಿಕೆಯಾಗಿ ನೇತಾಡುತ್ತಿತ್ತು. ಅದನ್ನು ಯಾವುದೋ ಪುಸ್ತಕದಿಂದ ಕತ್ತರಿಸಿ ಅಂಟಿಸಿದ್ದರು. ಒಂದು ಕ್ಷಣ ಗಾಬರಿಗೊಂಡೆ. ದೇಸಾಯಿಯವರು ಬೆಂಗಳೂರಿಗೆ ಬಂದರೆ ಲಾಡ್ಜ್‌ನಲ್ಲಿ ಇದೇ ರೀತಿಯ ದೃಶ್ಯವನ್ನು ನೋಡುತ್ತಿದ್ದೆ. ಹೊಸದಾಗಿ ಕೊಂಡು ತಂದ ಪುಸ್ತಕಗಳು, ಕಳಚಿದ ಷರ್ಟುಗಳು, ಕುಡಿದ ಬಾಟಲ್‌ಗಳು ಇತ್ಯಾದಿ. ನಲವತ್ತೈದು ವಯಸ್ಸನ್ನು ದಾಟದ ದೇಸಾಯಿ.

ಆ ದೇಸಾಯಿ ಮನೆಯಲ್ಲಿ ಒಂದೆರಡು ಅಡಿ ಮುಂದೆ ಹೋದೆವು. ಕತ್ತಲು ತುಂಬಿದ ದೊಡ್ಡದಾದ ಅಂಗಳ ಕಾಣಿಸಿತು. ಅಂಗಳದ ಮಧ್ಯೆ ಮಂಚದಲ್ಲಿ ಯಾರೋ

ಮಲಗಿದ್ದರು! ಬೆಳಗ್ಗೆ ಒಂಬತ್ತೂವರೆಯಾದರೂ ಮಲಗಿದ್ದಾರಲ್ಲ ಅಷ್ಟರಲ್ಲಿ ಯಾವುದೋ ಕ್ಷೀಣ ಸ್ವರ ನಮ್ಮ ಕಡೆ ಅಲೆಅಲೆಯಾಗಿ ಬಂತು. ಆ ಧ್ವನಿ ದೇಸಾಯಿ ಯವರ ಪತ್ನಿಯದಾಗಿತ್ತು. ಆಕೆ ಅನಾರೋಗ್ಯದಿಂದ ನರಳುತ್ತಿದ್ದಾಳೆ ಎಂಬುದನ್ನು ಇಡೀ ಮನೆಯೇ ಸಾರಿ ಹೇಳುತ್ತಿತ್ತು. ಆ ಧ್ವನಿಗೆ ಹುಡುಗನೊಬ್ಬ ಬಂದ. ನಮ್ಮನ್ನು ನೋಡಿ "ಅವರು ಇಲ್ಲ ಸಾಲಹಳ್ಳಿಗೆ ಹೋಗಿದ್ದಾರೆ" ಎಂದ. ಆ ಧ್ವನಿಯಲ್ಲಿ ಅನ್ಯೋನ್ಯತೆ ಇರಲಿಲ್ಲ. ಒಂದು ರೀತಿಯ ಅಸಡ್ಡೆ ಇತ್ತು. ನಾವು ಅಲ್ಲಿಗೆ ಬಂದದ್ದನ್ನು ನೆನಪಿಸಲು ಚೀಟಿ ಬರೆದುಕೊಟ್ಟು ಬಂದೆವು. ಆದರೆ ವಿಷಾದ ವ್ಯಕ್ತಪಡಿಸಿ ದೇಸಾಯಿ ಯವರಿಂದ ಪತ್ರಬರಲಿಲ್ಲ. ಬರುವುದಿಲ್ಲವೆಂದು ಗೊತ್ತಿದ್ದರೂ ಪತ್ರಕ್ಕಾಗಿ ಕಾದೆ. "ನನ್ನ ಪತ್ನಿ ಸ್ವರ್ಗಸ್ಥಳಾದಳು" ಎಂಬ ಒಂದು ಸಾಲಿನ ಪತ್ರ ಮತ್ತೆಮತ್ತೆ ಆಕೆಯ ಬಗ್ಗೆ-ಆತನ ಬಗ್ಗೆ ಯೋಚಿಸುವಂತೆ ಮಾಡಿತು. ಅಷ್ಟೊಂದು ಪ್ರತಿಭಾಶಾಲಿಯಾದ ವ್ಯಕ್ತಿ ಯಾಕೆ ಜೀವನಕ್ಕೆ ವಿಮುಖನಾದ ಎಂಬ ಪ್ರಶ್ನೆ ಕಾಡುತ್ತಿದೆ. ಹಾಗೆ ನೋಡಿದರೆ ದೇಸಾಯಿಯವರನ್ನು ಭೇಟಿಯಾಗಿರುವುದೆಲ್ಲ ನಾಲ್ಕೈದು ಬಾರಿ ಮಾತ್ರ. ಅಷ್ಟರಲ್ಲಿಯೇ ಆ ಮನುಷ್ಯನ ಹುಚ್ಚುಮುಖಗಳನ್ನು ನೋಡಿದ್ದೇನೆ. ಶೂದ್ರಕ್ಕೆ ಒಂದಷ್ಟು ಉತ್ತಮ ಲೇಖನಗಳನ್ನು ಬರೆದಾಗ "ಯಾರು ಈತ?" ಎಂದು ಕೇಳಿದವರೇ ಜಾಸ್ತಿ. ಒಂದು ಹಂತದಲ್ಲಿ ಚಂದ್ರಶೇಖರ ಕಂಬಾರರ ಸಾಹಿತ್ಯಕ್ಕೆ ಚಿಲುಮೆಯಾಗಿದ್ದವರು. ದೇಸಾಯಿ ಯವರ ವಕ್ರಬರವಣಿಗೆಯನ್ನು ನೀಟ್ ಕಾಪಿ ಮಾಡಿ ಕಳಿಸುತ್ತಿದ್ದವರು ಪದ್ಮರಾಜ ದಂಡಾವತಿಯವರು. ದೇಸಾಯಿಯವರ 'ಸಾವು ಮತ್ತು ಇತರ ಕಥೆಗಳು' ಸಂಕಲನ ಬಂದಾಗ ಲವಲವಿಕೆಯ ಚರ್ಚೆಯಾಯಿತು. ಹಾಗೆಯೇ ನಂತರ ಏನೂ ಬರೆಯದ ದೇಸಾಯಿ ನಮ್ಮ ಓದುಗರ ನೆನಪಿನಿಂದ ದೂರವಾದರು. ಕಳೆದ ತಿಂಗಳು ಒಂದು ಪತ್ರ ಬಂತು: "13–11–90ರಂದು ತಂದೆಯವರಾದ ಶ್ರೀ ಬಾಪು ಸಾಹೇಬ ಚು. ದೇಸಾಯಿ ಇವರು ಸ್ವರ್ಗಸ್ಥರಾದರು. ಪುಣ್ಯದಿನವನ್ನು 23ರಂದು ಶುಕ್ರವಾರ ಇಟ್ಟುಕೊಳ್ಳ ಲಾಗಿದೆ" ಎಂದು. ಮಗ ಸುನೀಲ ದೇಸಾಯಿಯ ಪತ್ರ. ನಾನಾ ವಿಷಾದದ ನಡುವೆ ತಕ್ಷಣ ಅನ್ನಿಸಿತು: ಈ ಮಗ ಅಪ್ಪನಿಂದ ಪ್ರೀತಿಯನ್ನು ಪಡೆದನೇ ಎಂದು. ಆ ಅಪ್ಪ ಸಂಗ್ರಹಿಸಿದ ಅಮೂಲ್ಯ ಪುಸ್ತಕಗಳೆಲ್ಲ ಈಗ ಏನಾಗಿರಬಹುದು ಎಂಬ ಪ್ರಶ್ನೆಯ ಮುಂದೆಯೇ ಪಳೆಯುಳಿಕೆಯಾಗಿದ್ದ ಸಾರ್ತ್ರೆಯ ಭಾವಚಿತ್ರ ಕಾಣಿಸಿತು. ಮಗ ಸುನೀಲ ದೇಸಾಯಿಗೆ ಪತ್ರಬರೆಯಲಾಗಲಿಲ್ಲ. ಬರೆಯಬೇಕಾಗಿತ್ತು. ಈಗ ಆ ಮುಗ್ಧ ಹುಡುಗ ಏಕಾಂಗಿ ಅಲ್ಲವೆ? ಈ ಏಕಾಂಗಿತನದಲ್ಲೂ ತಂದೆಯ 'ಸಾವು ಮತ್ತು ಇತರ ಕಥೆಗಳು' ಸಂಕಲನವನ್ನು ಓದದಿದ್ದರೆ ಓದಲಿ ಎಂದು ಆಶಿಸುವೆ.

8–12–90 –ಶೂದ್ರ ಶ್ರೀನಿವಾಸ್

## ವಿಮರ್ಶೆಗೆ ಬಂದ ಪುಸ್ತಕಗಳು–ವಿಮರ್ಶೆಗೆ ಮುನ್ನ

**ಕಾನುಗೋಡುಮನೆ** (ಕವನಸಂಕಲನ) : ಕೆ.ಎಚ್. ಶ್ರೀನಿವಾಸ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ(ತಾ), ಶಿವಮೊಗ್ಗ ಜಿಲ್ಲೆ. ಬೆಲೆ : 30 ರೂ. ನಮ್ಮ ಮಧ್ಯೆ ಬೆರಳೆಣಿಕೆಯಷ್ಟು ಪ್ರಜ್ಞಾವಂತ ರಾಜಕಾರಣಿಗಳಿದ್ದಾರೆ. ಅಂಥವರಲ್ಲಿ ಕೆ.ಎಚ್. ಶ್ರೀನಿವಾಸ ಅವರು ಒಬ್ಬರು. ಐವತ್ತೊಂದು ವರ್ಷದ ಈ ಸುಸಂಸ್ಕೃತ ರಾಜಕಾರಣಿ ಮೊದಲನೆಯ ಬಾರಿಗೆ ಈ ಸಂಕಲನ ತರುತ್ತಿದ್ದಾರೆ. ರಾಜಕಾರಣಿಯಾಗಿ ತರುತ್ತಿಲ್ಲ. ಕವಿಹೃದಯಿಯಾಗಿ ತರುತ್ತಿದ್ದಾರೆ. ಹಿಂದೆ ರವೀಂದ್ರನಾಥ ಠಾಕೂರರು ತಮ್ಮ ನಲವತ್ತೈದನೆಯ ವಯಸ್ಸಿನಲ್ಲಿ ಚಿತ್ರಕಲೆಯನ್ನು ಕಲಿತು ಅರ್ಥಪೂರ್ಣ ಕಲಾವಿದರಾದದ್ದನ್ನು ಅವರ ಚಿತ್ರಗಳನ್ನು ನೋಡಿ ಅಚ್ಚರಿಗೊಂಡಿದ್ದೆ. ಶ್ರೀನಿವಾಸರವರ ಈ ಸಂಕಲನವೂ ನನಗೆ ಆಶ್ಚರ್ಯವನ್ನು ಮತ್ತು ಸಂತೋಷವನ್ನು ಕೊಟ್ಟಿದೆ. ಈ ಸಂಕಲನದ ಹೆಸರಿನ 'ಕಾನುಗೋಡು ಮನೆ' ಕವನ ಒಂದು ಉತ್ತಮ ಕವನವಾಗಿದೆ. ನನ್ನ ಹಳ್ಳಿಯ ಮನೆಯನ್ನು ನೆನಪಿಗೆ ತಂದು ಕಾಡಿಸುವ ಕವನ. ನಮ್ಮೆಲ್ಲರ ಮನಸ್ಸುಗಳಲ್ಲಿ ಇಂಥ ಮನೆಗಳು ಇರುತ್ತವೆ ಅಲ್ಲವೆ ? ಇದರ ಜೊತೆಗೆ ಮತ್ತಷ್ಟು ನಾವು ಓದಬಹುದಾದ ಕವನಗಳಿವೆ. ಪುಸ್ತಕವನ್ನಂತೂ ತುಂಬ ಅಚ್ಚುಮೆಚ್ಚಾಗಿ ತಂದಿದ್ದಾರೆ. ಶ್ರೀನಿವಾಸರವರು ಕವಿಯಾಗುವ ಆತುರದಲ್ಲಿ ರಾಜಕಾರಣಿಯಾಗಿ ಮುಂದುವರೆಯುವುದನ್ನು ಮರೆಯದಿರಲಿ ಎಂದು ಆಶಿಸುವೆ.

**ಕರ್ಪುರದ ಕಾಯದಲ್ಲಿ** (ಕಥಾಸಂಕಲನ) : ರಾಜಶೇಖರ ನೀರಮಾನ್ವಿ, ಲೋಹಿಯಾ ಪ್ರಕಾಶನ, ಬಳ್ಳಾರಿ, ಬೆಲೆ: 15 ರೂ. ಬಳ್ಳಾರಿಯ ಕಪ್ಪುಮಣ್ಣಿನ ಈ ಕಥೆಗಾರ ಬಹಳ ಹಿಂದೆಯೇ ನನಗೆ ಮೆಚ್ಚಿಗೆಯಾದದ್ದು 'ಹಂಗಿನರಮನೆಯ ಹೊರಗೆ' ಸಂಕಲನದಿಂದ. ಹಳ್ಳಿಯ ಬದುಕಿನ ಗಾಢತೆಯನ್ನು ದಟ್ಟವಾಗಿ ನಿರೂಪಿಸುವ ಕಲೆಗಾರಿಕೆ ರಾಜಶೇಖರ ನೀರಮಾನ್ವಿಯವರಿಗಿದೆ.

**ಬಿಂಬ** (ನಾಟಕ) : ಚದುರಂಗ, ಇಳಾ ಪ್ರಕಾಶನ, ಬೆಂಗಳೂರು–18, ಬೆಲೆ: 18 ರೂ. ಹಿರಿಯ ಲೇಖಕರಾದ ಚದುರಂಗ ಅವರು ಇತ್ತೀಚೆಗೆ ಕಾವ್ಯ ಬರೆಯುವುದರ ಜೊತೆಗೆ ನಾಟಕ ಬರೆದಿದ್ದಾರೆ. ಕಾಲ ಕಳೆಯಲು ಬರೆದಿಲ್ಲ. ಸಂವೇದನಾಶೀಲರಾಗಿ ಬರೆದಿದ್ದಾರೆ. (ನಾಟಕ ಹಿಂದೆ ಬರೆದಿದ್ದರೂ) ವಸ್ತು : ರಾಮಾಯಣ. ಜನಾರ್ಧನ ಈಗಾಗಲೇ ಇದನ್ನು ಮೈಸೂರಿನಲ್ಲಿ ಪ್ರಯೋಗಿಸಿದ್ದಾರೆ.

**ಬಿಂದುಬಿಂದಿಗೆ** (ಕವನಸಂಕಲನ) : ವೈದೇಹಿ, ಅಕ್ಷರ ಪ್ರಕಾಶನ, ಸಾಗರ (ತಾ), ಹೆಗೋಡು, ಶಿವಮೊಗ್ಗ ಜಿಲ್ಲೆ, ಬೆಲೆ: 20 ರೂ. ವೈದೇಹಿಯವರು ಕನ್ನಡ

ಸಾಹಿತ್ಯ ಸಂದರ್ಭದಲ್ಲಿ ಗಮನಾರ್ಹ ಕಥೆಗಾರ್ತಿಯಾಗಿ ಬೆಳೆದುನಿಂತಿದ್ದಾರೆ. ಈಗ 'ಬಿಂದುಬಿಂದಿಗೆ' ಕವನ ಸಂಕಲನ ಹೊರಬರುತ್ತಿದೆ. ಈ ಸಂಕಲನ ಕವಯಿತ್ರಿಯಾಗಿ ಅವರನ್ನು ಪ್ರತಿನಿಧಿಸುವ ಸಂಕಲನವಂತೂ ಅಲ್ಲ. ಅವರು ದಟ್ಟವಾಗಿ ನಮ್ಮ ಎದಿರು ನಿಲ್ಲುವುದು ಕಥೆಗಾರ್ತಿಯಾಗಿ.

**ಕನ್ನಡಬೋಧನೆ–ಕೆಲವು ವಿಚಾರಗಳು :** ಮಹಾಬಲೇಶ್ವರರಾವ್, ಪ್ರಕಾಶನ–ಹಳೆ ವಿದ್ಯಾರ್ಥಿ ಸಂಘ, ಡಾ॥ ಟಿ.ಎಂ.ಎ. ಪೈ ಶಿಕ್ಷಣ ಮಹಾವಿದ್ಯಾಲಯ, ಉಡುಪಿ–2, ಬೆಲೆ : 25 ರೂ. ಮಹಾಬಲೇಶ್ವರರಾವ್ ಅವರು ನಮ್ಮ ಶಿಕ್ಷಣ ವ್ಯವಸ್ಥೆ ಬಗ್ಗೆ ಸೂಕ್ಷ್ಮವಾಗಿ ನೋಡುವಂಥವರು. ಈ ನಿಟ್ಟಿನಲ್ಲಿ ಈಗಾಗಲೇ ಒಂದಷ್ಟು ಸಾರ್ಥಕ ಕೆಲಸವನ್ನು ಮಾಡಿದ್ದಾರೆ. ಈ ದೃಷ್ಟಿಯಿಂದ ಪ್ರಸ್ತುತ ಕೃತಿ ಅರ್ಥಪೂರ್ಣ.

**ಮತ್ತೆ ಸೂರ್ಯ ಬರುತ್ತಾನೆ** (ಕವನ ಸಂಕಲನ) : ಲೋಕೇಶ ಅಗಸನ ಕಟ್ಟೆ, ಪ್ರಕಾಶಕರು, ಯುವ ಹಿರಿಯ ವಿದ್ಯಾರ್ಥಿ ಸಂಘ, ಎಂ. ಬಸವಯ್ಯ ವಸತಿ ಮಹಾವಿದ್ಯಾಲಯ, ಸಿರಿಗೆರೆ, ಚಿತ್ರದುರ್ಗ ಜಿಲ್ಲೆ. ಇದು ಅಗಸನಕಟ್ಟೆಯವರ ಮೊದಲ ಸಂಕಲನ. ಕಾವ್ಯವನ್ನು ಗಂಭೀರವಾಗಿ ತೆಗೆದುಕೊಂಡಿರುವ ಸಾಹಿತ್ಯದ ವಿದ್ಯಾರ್ಥಿ. ಈ ಸಂಕಲನದಲ್ಲಿ ಮಾ ನಿಷಾದ, ಒಂದು ಮರ ಹುಟ್ಟಿದ್ದರೆ, ಏನು ಬರೆಯಲಿ ಗೆಳೆಯ, ನಾಗಲಿಂಗ, ಮತ್ತೆ ಸೂರ್ಯ ಬರುತ್ತಾನೆ ಕವನಗಳು ಆಪ್ತವಾದವು. ಓದಬಹುದಾದ ಸಂಕಲನ.

**ಹುಟ್ಟು ಸಾವುಗಳ ಮಧ್ಯೆ** (ಲೇಖನಗಳು) : ಶ್ರೀ ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು, ತರಳಬಾಳು ಪ್ರಕಾಶನ, ಸಿರಿಗೆರೆ, ಚಿತ್ರದುರ್ಗ ಜಿಲ್ಲೆ, ಬೆಲೆ: 18 ರೂ. ಶ್ರೀ ಪಂಡಿತಾರಾಧ್ಯ ಸ್ವಾಮಿಗಳು ಶೂದ್ರದ ಓದುಗರಿಗೆ ಅಪರಿಚಿತರೇನೂ ಅಲ್ಲ. ಸ್ವತಂತ್ರವಾಗಿ ಯೋಚಿಸುವ ಇವರು ಮಠದೊಳಗೆ ಅವಿತು ಕೂತಿರುವ ಸ್ವಾಮಿಗಳಲ್ಲ. ನಮ್ಮ ಜನರ ಬವಣೆಗಳ ಮಧ್ಯೆ ಬದುಕುತ್ತಿರುವಂಥವರು. ಆ ಜನರಲ್ಲಿ ನಲಿವು ಕಾಣಲು ಬರೆದಂಥ ಲೇಖನಗಳಿವು. ಉತ್ತಮ ಗದ್ಯ ಬರಹಗಾರರು.

**ಜನಪದ ವಿಚಾರ** (ದ್ವೈಮಾಸಿಕ) : ಜನಪದ ಸೇವಾ ಟ್ರಸ್ಟ್, ಮೇಲು ಕೋಟೆ, ಮಂಡ್ಯ ಜಿಲ್ಲೆ. ಸುರೇಂದ್ರ ಕೌಲಗಿಯವರು ಅಪ್ಪಟ ಗಾಂಧೀವಾದಿ. ಎಲೆ ಮರೆಯ ಕಾಯಿಯ ರೀತಿಯಲ್ಲಿ ದುಡಿಯುತ್ತಿರುವ ವ್ಯಕ್ತಿ. ಇತ್ತೀಚೆಗೆ ಈ ಪತ್ರಿಕೆ ಜೀವಂತವಾಗಿ ಬರುತ್ತಿದೆ. ಗೆಳೆಯ ಕೆ.ಪಿ. ಸುರೇಶ್‌ರವರು ಇದರಲ್ಲಿ ದುಡಿಯುತ್ತಿದ್ದಾರೆ.

–ಸಿದ್ಧಾರ್ಥ

# ಪುಸ್ತಕ ವಿಮರ್ಶೆ

## ಸ್ನಿಗ್ಧ ಭಾವದ ಕಾವ್ಯ – ಇನ್ನೊಬ್ಬಳು ಶಕುಂತಲೆ

ತಮ್ಮ ಮೊದಲ ಕವನ ಸಂಗ್ರಹ 'ಮೊದಲು ಗೊತ್ತಿರಲಿಲ್ಲ'ದ ಮೂಲಕ ಎದ್ದು ಕಂಡ ಕವಿ ಕೆ. ಎಂ. ಮುನಿಕೃಷ್ಣಪ್ಪ ಅವರ ಎರಡನೆಯ ಸಂಕಲನ 'ಇನ್ನೊಬ್ಬಳು ಶಕುಂತಲೆ'. ಕವಿಯ ಭಾವನೋಟದಲ್ಲಾದ ಗಮನಾರ್ಹ ಬೆಳವಣಿಗೆಯನ್ನು ಇಲ್ಲಿ ನಾವು ಕಾಣಬಹುದಾಗಿದೆ. ಅದರ ಜೊತೆಗೇ ಅನುಭವಗಳನ್ನು ಕಲಾತ್ಮಕತೆಯೊಂದಿಗೆ ದಾಖಲಿಸುವ ಪ್ರಯತ್ನ ಸಡಿಲಗೊಂಡಿರುವುದೂ ಕಾಣುತ್ತದೆ. ಏನಿದ್ದರೂ ಕವಿ ಇಲ್ಲಿ ಕಾವ್ಯದ ಹಿಂದಿನ ಮೆಟ್ಟಿಲೇರಿ ನಿಂತದ್ದು ಸ್ಪಷ್ಟವಾಗುತ್ತದೆ. ಮುನ್ನುಡಿ ಬರೆದ ಶ್ರೀ ಶಂಕರ ಮೊಕಾಶಿ ಪುಣೇಕರ ಅವರು ಹೇಳಿದಂತೆ ಮುನಿಕೃಷ್ಣಪ್ಪನವರು ಈ ಸಂಕಲನದಲ್ಲಿ ತಂತ್ರ–ವಿನ್ಯಾಸ–ವಿಚಾರಗಳಲ್ಲಿ ಪಕ್ವಗೊಂಡಿದ್ದಾರೆ. 'ಪಕ್ವ' ಎಂಬ ಶಬ್ದವನ್ನು ನಾವು ಎಚ್ಚರಿಕೆಯಿಂದ ಗಮನಿಸಬೇಕು. ಆರಂಭ ಅಥವಾ ಅಂತ್ಯ ಎರಡೂ ಆ ಶಬ್ದದಲ್ಲಿವೆ. ಕೃಷ್ಣಪ್ಪನವರ ಕಾವ್ಯಜೀವನ ಇಲ್ಲಿ ಪಕ್ವಾರಂಭಗೊಂಡಿದೆ ಎಂದೇ ನಾವು ಭಾವಿಸಬೇಕಾಗಿದೆ. ಈ ಕಾರಣದಿಂದ ನಾವು ಇನ್ನೊಬ್ಬಳು ಶಕುಂತಲೆಯನ್ನು ಓದಬೇಕು.

ಈ ಸಂಕಲನದಲ್ಲಿ ದೊಡ್ಡ ಕವನಗಳು ಒಂದಿಷ್ಟು, ಕಿರುಗವನಗಳು ಕೆಲವು ಇವೆ. 'ಗಪದ್ಯಗಳು' ಎಂದು ಕೆಲವು ಕವನಗಳನ್ನು ವಿಭಾಗಿಸಲಾಗಿದೆ. ವಸ್ತುವಿನ ಪರಿಧಿಗೆ ಅನುಗುಣವಾಗಿ ಇವು ರಚಿತವಾಗಿವೆ. ಅಲ್ಲದೆ ಚೀನಾದ ಕವಿ 'ಯಾಂಗ್ ಕ್ವಾನ್' ನೆನಪಿಗೆ ನಾಲ್ಕು ಸಾಲಿನ ಪದ್ಯವೊಂದಿದೆ. ಇಲ್ಲಿಯ ಬಹುತೇಕ ಪದ್ಯಗಳಲ್ಲಿ ಶಬ್ದಗಳನ್ನು ಆಡಿಸುವ ಚಾಕಚಕ್ಯತೆ ಕವಿಗೆ ಸಿದ್ಧಿಸುತ್ತಿರುವುದನ್ನು ಕಾಣಬಹುದಾಗಿದೆ.

ಆದರೆ ಕೇವಲ ಶಬ್ದ ಸಂಪತ್ತು ಒಬ್ಬ ಕವಿಯ ಅರ್ಹತೆ ಅನಿಸುವುದಿಲ್ಲ. ಭಾವ ತೀವ್ರತೆ, ಸ್ಪಂದನ, ಅಭಿವ್ಯಕ್ತಿಯಲ್ಲಿನ ಕಲಾತ್ಮಕತೆ, ಜೀವನದೃಷ್ಟಿಗೂ ಮುಖ್ಯವಾಗುತ್ತವೆ. ಇಲ್ಲಿ ಕವಿ ಸಮಗ್ರ ಜೀವನದ ರಸಗ್ರಹಣದತ್ತ ನೋಟ ಹಾಕಿದ್ದರೂ ಅದು ಆಳವಾಗಿಲ್ಲ, ಅದು ವಾರೆನೋಟವಾಗಿದೆ. ಅದಕ್ಕೆ ಮುಖ್ಯ ಕಾರಣ ಕವಿ ಇನ್ನೂ ಸಾಧನೆಯ ಮಾರ್ಗದಲ್ಲಿರುವುದು. ಹಾಗಾಗಿ ಮುನಿಕೃಷ್ಣಪ್ಪನವರನ್ನು ಇಲ್ಲಿ ನಾವು ಗುರುತಿಸಬೇಕಾದುದು ಓರ್ವ ಪ್ರತಿಭಾವಂತ ಯುವಕವಿಯಾಗಿ. ಜೀವನಸಮೃದ್ಧಿ ಮನುಷ್ಯನಿಗೆ ಆಳವಾದ ಅನುಭವ ನೀಡುತ್ತದೆ. ಹಾಗೆ ಕವಿಗೆ ಅಭಿವ್ಯಕ್ತಿಯಲ್ಲಿ ಸರಳತೆ, ಕಲಾತ್ಮಕತೆಯನ್ನು ಸಹಜವಾಗಿ ಕೊಡಬಲ್ಲುದು. ಈ ದಿಕ್ಕಿನಲ್ಲಿ ಆಶಾಭಾವ ತಾಳಬಲ್ಲ ಅನೇಕ ಕವನಗಳನ್ನು ಕವಿ ಇಲ್ಲಿ ಸಂಕಲಿಸಿದ್ದಾರೆ.

ಬಾಲಭಾವದ ಒಂದೆರಡು ಕವನಗಳು ಮೊದಲ ನೋಟಕ್ಕೇ ನಮ್ಮನ್ನು ಆಕರ್ಷಿಸು

---

ಹೂಲಿಶೇಖರ್, ಸಹಾಯಕ (ಕಾಮಗಾರಿ), ಕರ್ನಾಟಕ ವಿದ್ಯುತ್ ನಿಗಮ
ಕಾಳಿ ಜಲವಿದ್ಯುತ್ ಯೋಜನೆ, ಅಂಬಿಕಾನಗರ (ಉ.ಕ.)

ತ್ತದೆ, 'ನಗುವ ಮಕ್ಕಳು' ದನಿಗೆ ರಾಗ ಕೊಡಬಲ್ಲದು. ಇನ್ನೊಂದು ಕವನ 'ನಗುವ ಮಗುವಿನ ನೋಟದಲ್ಲಿ' ಇದೇ ವರ್ಗದ್ದು. "ಜಿನುಗುವ ಹನಿಹನಿ ಮಳೆಯೂ ಮುತ್ತಾಗುವುದಿಲ್ಲ, ಚಿಪ್ಪಿನೊಳಗೆ ಹೊಕ್ಕು ಹಾಗೇ ಅಡಗುವುದಿಲ್ಲ" ಎಂದಿದ್ದಾರೆ. ಇಂಥ ತಾರ್ಕಿಕ ಭಾವದ ಅನೇಕ ಪದ್ಯಗಳು ಸಂಗ್ರಹದಲ್ಲಿವೆ. ಇಲ್ಲಿ ಮನತಟ್ಟುವ ಒಂದು ಕವಿತೆ 'ದೀಪದ ಕಣ್ಣು ಹುಡುಗ'. ಅಂಥ ಹುಡುಗನನ್ನು ಯಾರೂ ನೋಡಿರ ಬಹುದು. ಆದರೆ ಮುನಿಕೃಷ್ಣಪ್ಪನವರ ಇಲ್ಲಿಯ ನೋಟದಲ್ಲಿ ಆರ್ದ್ರವತೆಯಿದೆ.

"ನಲಿವ ಮಕ್ಕಳ ನೋಡಿ ಒಳಗೊಳಗೆ ಮುಲುಗುವ
ಜೋಪಡಿಯ ಬಾಲಗೋಪಾಲನಿರಬೇಕು"

ಎನ್ನುವ ಸಾಲುಗಳು ತನ್ನ ಹಿಂದೆ ಇರುವ ನೋವನ್ನು ಭಾವಪೂರ್ಣವಾಗಿ ಇಲ್ಲಿ ದಾಖಲಿಸಿದೆ.

"ಕ್ಷಮಿಸು ಎದುರಿಸಲಾರೆ ನಿನ್ನ ನೋಟ
ನಾನೇನು ನೀಡಬಲ್ಲೆ ಬರೀ ಕವಿತೆ"

ಎನ್ನುವ ಅಸಹಾಯಕತೆ ಕೇವಲ ಒಬ್ಬ ಕವಿಯದಲ್ಲ. ಸಮಗ್ರ ಸಮಾಜದ ಅಸಹಾಯಕತೆ ಯಾಗುತ್ತದೆ. ಪರಿಸರದ ಸೂಕ್ಷ್ಮಪ್ರಜ್ಞೆಯತ್ತ ಕವಿಯ ಗಮನ ಹರಿದಿರುವುದು ಇಂಥ ಇನ್ನೂ ಕೆಲವು ಕವನಗಳಲ್ಲಿವೆ. ಮುನ್ನುಡಿಯಲ್ಲಿ ಹೇಳಿದಂತೆ ಭಾಷೆ ಮತ್ತು ತಂತ್ರದಲ್ಲಿ ಯಶಸ್ಸು ಪಡೆದ ಕವನ 'ಇನ್ನೊಬ್ಬಳು ಶಕುಂತಲೆ'. ಕವಿಯ ತಲ್ಲೀನತೆ ಇದರಲ್ಲಿ ಎದ್ದು ಕಾಣುತ್ತದೆ. ಭಾವುಕತೆಯಲ್ಲಿ ಶಬ್ದಗಳನ್ನುಪಯೋಗಿಸುವ ಬುದ್ಧಿವಂತಿಕೆಯಿಂದಾಗಿ ಈ ಕವನ ಇಷ್ಟವಾಗುತ್ತದೆ. ಸಂತೃಪ್ತ ಕಾವ್ಯಧ್ವನಿ ಇಲ್ಲಿರುವುದರಿಂದ ಮತ್ತೊಮ್ಮೆ ಓದಬೇಕೆನಿಸುತ್ತದೆ.

ಒಟ್ಟಿನಲ್ಲಿ ಮುನಿಕೃಷ್ಣಪ್ಪ ವಿಭಿನ್ನ ರೀತಿಯ ಪದ್ಯಗಳನ್ನು ಇಲ್ಲಿ ಸಂಕಲಿಸಿದ್ದಾರೆ. ಇವರ ಕಿರುಗವನಗಳಲ್ಲಿಯ ಒಂದು ಕೊರತೆಯೆಂದರೆ ಚೂಪುತನ ಇಲ್ಲದಿರುವುದು. ಹಸೀ ಗೋಡೆಗೆ ಕಲ್ಲು ಹೊಡೆದ ಅನುಭವ ನೀಡಬೇಕಾದ ಕಿರುಗವನಗಳು ಕೆಲವೊಮ್ಮೆ ತನ್ನ 'ಸರಳೀಕರಣ'ದಿಂದಾಗಿ ಉದುರಿ ಬೀಳುತ್ತವೆ. ಬಹುಶಃ ವಸ್ತುವಿನ ಆಯ್ಕೆಯಲ್ಲಿನ ಗೊಂದಲವೂ ಅದಕ್ಕೆ ಕಾರಣವಾಗಿರಬಹುದು. ಉಳಿದಂತೆ ಮುನಿಕೃಷ್ಣಪ್ಪ ಹಿಂದಿನ ಭರವಸೆಯನ್ನು ಉಳಿಸಿಕೊಂಡು ಇಲ್ಲಿ ಬೆಳೆದಿದ್ದಾರೆ. ಪುಣೇಕರರು ಹೇಳಿದ ಹಾಗೆ ಪಕ್ವತೆಯನ್ನು ಸಾಧಿಸಿ ಅವರ ಮುಂದಿನ ಬೆಳವಣಿಗೆಗೆ ಮಾರ್ಗ ಮಾಡಿಕೊಂಡಿದ್ದಾರೆ. ನಾವು ಅವರ ಮುಂದಿನ ಪುಸ್ತಕಕ್ಕೆ ಕಾಯುವ ಕುತೂಹಲವನ್ನು ಉಳಿಸಿಕೊಡುತ್ತಾರೆ. ಅಚ್ಚುಕಟ್ಟಾದ ಮುದ್ರಣ, ಸುಂದರ ವರ್ಣಚಿತ್ರದ ಹೊದಿಕೆ ಹೊಂದಿರುವ 'ಇನ್ನೊಬ್ಬಳು ಶಕುಂತಲೆ' ನೋಡಲೂ ಅಂದವಾಗಿದೆ. — ಹೂಲಿಶೇಖರ್

# ಒಳನೋಟ

ನಮ್ಮ ಸುತ್ತ, ದೂರದ ಉತ್ತರ ಭಾರತದಲ್ಲಿ ಮಾತ್ರವಲ್ಲ, ಹತ್ತಿರದ ಹಾಸನ, ಸಕಲೇಶಪುರ, ದಾವಣಗೆರೆಗಳಲ್ಲೂ ರಾಜಕೀಯ ಕಾರಣಗಳಿಗೆ ಆಗುತ್ತಿರುವ ಕೊಲೆಗಳನ್ನು ನೋಡಿದರೆ, ಸಾಹಿತ್ಯ ವಿಮರ್ಶೆ ಇತ್ಯಾದಿಗಳು marginal ಅನ್ನಿಸುತ್ತವೆ. ಆದರೆ ಮತ್ತೊಮ್ಮೆ ಯೋಚಿಸುವಾಗ ಅಲ್ಲ ಎಂದು ಕಾಣುತ್ತದೆ. ಇತ್ತೀಚೆಗಿನ ಕೊಲೆಗಳು ರಾಮನ ಹೆಸರಿನಲ್ಲಿ ನಡೆದಿವೆ. ಆದರೆ ರಾಮ ಒಂದು ಸಾಂಸ್ಕೃತಿಕ ಆದರ್ಶ ಕೂಡ ಹೌದಲ್ಲವೆ ? ಕಡೆಯ ಪಕ್ಷ ಅಡಿಗರ 'ರಾಮನವಮಿಯ ದಿವಸ'ದ ರಾಮನಂತೂ ಅಂತಹ ಒಂದು ಆದರ್ಶ; ಮತೀಯವಾದದ ಸಂಕೇತ ಅಲ್ಲ ಎಂದು ಈಗಲೂ ನನ್ನ ನಂಬಿಕೆ.

ಉಡುಪಿ — ಜಿ. ರಾಜಶೇಖರ್

**ಮುಂಡಕೋಪನಿಷತ್ ಕುರಿತು**

ಶೂದ್ರ (17–1, ನವೆಂಬರ್, 90) ದಲ್ಲಿ ಬಂದ ಆರ್. ಡಿ. ಹೆಗಡೆ ಅವರು ಬರೆದ ಒಳನೋಟಗಳ ಬಗ್ಗೆ ಮೆಚ್ಚಿಕೊಳ್ಳುತ್ತಲೇ, ಚರ್ಚೆಗಾಗಿ ಒಂದು ಅಭಿಪ್ರಾಯ.

ದ್ವಾಸುಪರ್ಣಾ ಸಯುಜಾ ಸಖಾಯ....ರುತ್ತ ಸಮಾನೇ ವೃಕ್ಷೇ ಪುರುಷೋ ನಿಮಗ್ನೋ.... ಎಂಬ ಶ್ಲೋಕಗಳು ಹೆಗಡೆ ಅವರು ನೀಡಿರುವ ಉದಾರ ವಿವರಣೆಗೆ ಆಸ್ಪದ ನೀಡುತ್ತವೆಯೆ ! ಎಂಬುದು ಸಂದೇಹ.

ಅಲ್ಲಿ ಹೇಳಿದ ಹಕ್ಕಿಗಳು, ಆತ್ಮ–ಪರಮಾತ್ಮಗಳೆಂಬ ಸಾಂಪ್ರದಾಯಿಕ ನಿಲುವೇಯೇ ಸರಿಯೇನೋ ಅನಿಸುತ್ತದೆ. ಅನಶ್ನನ್ (ತಿನ್ನದ) ಆತ್ಮವೇ ಸುಖಿ. ಪಿಪ್ಪಲದ ಫಲವನ್ನು ತಿಂದುದು, ಅರ್ಥಾತ್ ಪ್ರವೃತ್ತಿ ಮಾರ್ಗದಲ್ಲಿರುವ ಜೀವ, ಅದು "ಶೋಚತಿ ಮುಹ್ಯಮಾನಃ" ಇನ್ನೊಂದು "ಈಶ ಆಗಿದ್ದು, ಸುಮ್ಮನಿದೆ.

ಹಾಗಾದರೆ, ಇಲ್ಲಿ ಪ್ರವೃತ್ತಿ ವಿರೋಧವಾದ, ಸ್ಥಿತಿಯೇ ಇಲ್ಲಿ ಕೀರ್ತಿಸಲ್ಪಟ್ಟಿದೆಯೆ ? ಅಲ್ಲ, 'ಪಿಪ್ಪಲ' (ಲೋಕ, ಭೋಗ)ದ ಮೇಲಿದ್ದೂ, ಸಾಕ್ಷಿಯಾಗಿರುತ್ತ ಶಾಂತಿಯನ್ನು ಪಡೆಯುವ ದೃಷ್ಟಿಯು ಜೀವನದೇ ಸ್ಥಿತಿ ಎಂಬ ಅರ್ಥವೆ ?

ಮಂಗಳೂರು — ಎಂ. ಪ್ರಭಾಕರ ಜೋಶಿ

# ನಮ್ಮ ಪತ್ರಿಕೋದ್ಯಮ - ರಾಂ ವಿಶ್ಲೇಷಣೆ

ನಮ್ಮ ಪತ್ರಿಕೋದ್ಯಮ ಈಗ ವಸ್ತುನಿಷ್ಠವಾಗಿ ಉಳಿದಿಲ್ಲ. ಅದರಲ್ಲೂ ಈಚಿನ ಮಂಡಲ್ ವರದಿ ಹಾಗೂ ರಾಮಜನ್ಮಭೂಮಿ ವಿವಾದದ ವರದಿಗಳಂತೂ ಸಂಪೂರ್ಣ ಹಾದಿ ತಪ್ಪಿದವಾಗಿದ್ದವು ಎಂದು ಹಿರಿಯ ಪತ್ರಕರ್ತ ಹಾಗೂ 'ಹಿಂದೂ' ಪತ್ರಿಕೆಯ ಸಹ ಸಂಪಾದಕ ಎನ್. ರಾಂ ಇತ್ತೀಚೆಗೆ ಅಭಿಪ್ರಾಯಪಟ್ಟರು.

ರಾಷ್ಟ್ರೀಯ ಕಾನೂನು ಶಾಲೆ ಆಶ್ರಯದಲ್ಲಿ 'ಕೋಮುವಾದ ಹಾಗೂ ಮಾಧ್ಯಮದ ಪಾತ್ರ' ಕುರಿತು ಮಾತನಾಡಿದ ಅವರು ಮಂಡಲ್ ವರದಿ ವಿರೋಧಿ ಚಳವಳಿಗೆ ಹೆಚ್ಚು ಪ್ರಾಶಸ್ತ್ಯ ಕೊಟ್ಟುದನ್ನು ಗಮನಿಸಿದರೆ 'ಪತ್ರಕರ್ತರು ವರದಿಗಾರರ ಪಾತ್ರ ವಹಿಸುತ್ತಿಲ್ಲ' ಎಂಬುದು ಸ್ಪಷ್ಟವಾಯಿತು ಎಂದು ಹೇಳಿದರು.

ರಾಮಜನ್ಮಭೂಮಿ ಹಾಗೂ ಬಾಬರಿ ಮಸೀದಿ ವಿವಾದಕ್ಕೆ ಸಂಬಂಧಿಸಿದಂತೆ ಪತ್ರಕರ್ತರು ತೆಗೆದುಕೊಂಡ ನಿಲುವು ಅವರವರ ಸಾಮಾಜಿಕ ಮೂಲಗಳಿಗೆ ಅನುಗುಣ ವಾಗಿತ್ತು. ಕಾರಸೇವಕರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸುತ್ತಿದ್ದಾರೆ ಎಂಬ ರೀತಿಯಲ್ಲಿ ಎಲ್ಲ ಪತ್ರಿಕೆಗಳಲ್ಲಿ ಸುದ್ದಿ ಪ್ರಕಟವಾದವು ಎಂದು ಅವರು ವಿಷಾದ ವ್ಯಕ್ತ ಪಡಿಸಿದರು.

ಈಗ ಎದ್ದಿರುವ ಹಿಂದೂವಾದ ಒಂದು ದೊಡ್ಡ ರಾಜಕೀಯ ಆಟವಾಗಿದೆ. ಬೇರೆ ಪಕ್ಷಗಳು ವಿಫಲವಾಗಿರುವುದರಿಂದ ಹಿಂದೂ ಹೆಸರಿನಲ್ಲಿ ಅಧಿಕಾರ ಹಿಡಿಯಲು ಕೆಲವು ಪಕ್ಷಗಳು ಪ್ರಯತ್ನಿಸುತ್ತಿವೆ ಎಂದು ನಿವೃತ್ತ ಹಿರಿಯ ಅಧಿಕಾರಿ ನಿರ್ಮಲ್ ಮುಖರ್ಜಿ ಅವರು ಹೇಳಿದ್ದು ನಿಜ ಎಂದ ಎನ್. ರಾಂ ಅವರು ಕಾನೂನು ವಿದ್ಯಾರ್ಥಿಗಳು ಕೋಮು ಕೋಮುಗಳ ಮಧ್ಯೆ ಸೌಹಾರ್ದ ತರಲು ಕ್ರಿಯಾಶೀಲರಾಗಿ ಕಾರ್ಯ ನಿರ್ವಹಿಸ ಬೇಕು ಎಂದು ಸಲಹೆ ಮಾಡಿದರು.

ರಾಜಕೀಯ ಹಾಗೂ ಧರ್ಮ ಬೆರೆಯಬಾರದು ಎಂಬುದೇ ತಮ್ಮ ದೃಢ ನಿಲುವು ಎಂದೂ ಅವರು ಸ್ಪಷ್ಟಪಡಿಸಿದರು.

FNP/KRNU/72 No. M (2) PRB 211/73/74

SHOODRA Kannada Monthly

ಜನವರಿ 1991ರ ಸಂಚಿಕೆಯಲ್ಲಿ :

ಬಿಳಿಮಲೆ ರಾಮದಾಸ್ – ಪಿ. ವಿ. ಸುಬ್ರಾಯ – ಗಿರೀಶ್ ಕಾರ್ನಾಡ್
ಕಿ. ರಂ. ನಾಗರಾಜ – ಬಳುಗುಳಿ ರವೀಂದ್ರ ಭಟ್ – ಶಶಿಕಲಾ ವೀರಯ್ಯ
ಸ್ವಾಮಿ–ಧರಣೇಂದ್ರ ಕುರಕುರಿ–ಎಸ್. ಮಂಜುನಾಥ್–ಮನುಚಕ್ರವರ್ತಿ
ಕನಸಿಗೊಂದು ಕಣ್ಣು–ಸುದ್ದಿಯ ಗುದ್ದಾಟ–ಪುಸ್ತಕ ವಿಮರ್ಶೆ ಇತ್ಯಾದಿ.

ಏಪ್ರಿಲ್ ತಿಂಗಳಲ್ಲಿ ಅಂಬೇಡ್ಕರ್ ಅವರ ಬಗ್ಗೆ ವಿಶೇಷಾಂಕ ಬರುತ್ತಿದೆ. ಇದನ್ನು ಡಾ|| ಎಸ್. ಚಂದ್ರಶೇಖರ್ ಅವರು ಸಂಪಾದಿಸಿಕೊಡುವರು. ಶೂದ್ರದ ಓದುಗರಿಗೆ ಹೊಸದಾಗಿ ಏನಾದರೂ ಬರೆಯಬೇಕೆನ್ನಿಸಿದ್ದರೆ ದಯವಿಟ್ಟು ಬರೆದು ಕಳಿಸಿ. ಅದರಲ್ಲಿ ಸೂಕ್ತವಾದದ್ದನ್ನು ಚಂದ್ರಶೇಖರ್ ಆರಿಸಿ ಪ್ರಕಟಿಸುವರು. ಸಂ. :

Rebellion cannot exist without the feeling that, somewhere and somehow one is wright.

— *Albert Camus*

M. Srinivas, Editor for Shudra, Printed at :
Pallavi Printers, No. 1, 3rd Cross, Balaji Nagar,
Suddagunte Palya, D.R.College Post, Bangalore–29